# ಮಕ್ಕಳ ಪ್ರಾರಂಭಿಕ ಶಿಕ್ಷಣ ಹಾಗೂ ಮನೆಯ ಭಾಷೆ

(ಮನೆ ಭಾಷೆಯಿಂದ ಸ್ಥಳೀಯ ಪಠ್ಯಕ್ರಮದವರೆಗೆ)

ಆದೇಶ್ ಕುಮಾರ್ ಸಿಂಗ್

ವಿದ್ಯಾ ಭವನ ಶಿಕ್ಷಣ ಪರಾಮರ್ಶೆ ಕೇಂದ್ರ, ಉದಯಪುರ

ಈ ಕಿರುಹೊತ್ತಿಗೆಯಲ್ಲಿ ನಾವು ಮಕ್ಕಳ ಪ್ರಾರಂಭಿಕ ಶಿಕ್ಷಣದಲ್ಲಿ ಮಕ್ಕಳ ಮನೆ ಭಾಷೆ ಅಥವಾ ಸ್ಥಳೀಯ ಭಾಷೆಯ ಬಳಕೆಯ ಪ್ರಾಮುಖ್ಯತೆಯ ಕುರಿತು ಚರ್ಚಿಸೋಣ ಹಾಗೂ ಶಾಲೆಯಲ್ಲಿ ಬೋಧನಾ ಭಾಷೆಯ ನಡುವಿನ ವ್ಯತ್ಯಾಸಗಳು, ಎದುರಾಗುವ ಸವಾಲುಗಳು ಮತ್ತು ಅದಕ್ಕೆ ಇರಬಹುದಾದ ಪರಿಹಾರಗಳನ್ನು ಬುಡಕಟ್ಟು ಸಮುದಾಯದ ಮಕ್ಕಳೊಂದಿಗೆ ಕೆಲಸ ಮಾಡಿದ ಹಿನ್ನೆಲೆಯಲ್ಲಿ ಚರ್ಚಿಸೋಣ. ಜೊತೆಗೆ ತರಗತಿಯಲ್ಲಿ ಭಾಷಾ ವೈವಿಧ್ಯತೆಯ ವಾತಾವರಣದಲ್ಲಿ ಮಗುವಿನ ಮನೆಯ ಭಾಷೆಯ ಪ್ರಯೋಗವು ಮಗುವಿನ ಎರಡನೇ ಭಾಷೆಯ ಅರ್ಜನೆಯ ಪ್ರಕ್ರಿಯೆಯಲ್ಲಿ ವಹಿಸುವ ಪಾತ್ರದ ಬಗೆಗೆ ಕೂಡ ಚರ್ಚಿಸೋಣ. ಇದಲ್ಲದೆ, ಪಠ್ಯದೊಂದಿಗೆ ಪರ್ಯಾಯವಾಗಿ ಮನೆ ಭಾಷೆಯ ಆಯ್ಕೆಯು ಉದ್ದಿಷ್ಟ ಭಾಷಾ ಅರ್ಜನೆಯಲ್ಲಿ ಮಿಶ್ರ ಭಾಷಾ ಮಜಲಿನ ಮಹತ್ವದ ವಿಶ್ಲೇಷಣೆಯನ್ನೂ ಮಾಡುತ್ತದೆ. ಮಕ್ಕಳಿಗೆ ಮನೆಯಲ್ಲಿನ ಅನುಭವಗಳು ಅಥವಾ ಸ್ಥಳೀಯ ಕಥೆಗಳು/ಪದ್ಯಗಳನ್ನು ಒಳಗೊಂಡಂತೆ ಈ ಯೋಜನೆಯಲ್ಲಿ ಬಳಸಲಾದ ಮಕ್ಕಳ ಸಾಹಿತ್ಯದ ಅನುಭವಗಳನ್ನು ಕೂಡ ಇಲ್ಲಿ ಹಂಚಿಕೊಳ್ಳಲಾಗಿದೆ. ಮನೆ ಇಲ್ಲವೇ ಸ್ಥಳೀಯ ಭಾಷೆಯ ಬಳಕೆಯು ಸ್ಥಳೀಯ ಸಾಮಾಜಿಕ-ಸಾಂಸ್ಕೃತಿಕ ಪರಿಸರವನ್ನು ಕೂಲಂಕಷವಾಗಿ ಅಧ್ಯಯನ ಮಾಡಲು ಹಾಗೂ ನಮ್ಮದೇ ಆದ ಸ್ಥಳೀಯ ಪಠ್ಯಕ್ರಮವನ್ನು ರೂಪಿಸುವ ಅವಶ್ಯಕತೆಗಾಗಿ ನಮ್ಮನ್ನು ಹೇಗೆ ಪ್ರೇರೇಪಿಸಿತು ಎಂಬ ಮಾಹಿತಿ ಬಗೆಗೂ ಚರ್ಚಿಸೋಣ.

ಪ್ರಾರಂಭಿಕ ಶಿಕ್ಷಣದಲ್ಲಿ ಸ್ಥಳೀಯ ಪರಿಸರದ ಅನ್ವೇಷಣೆಯ ಮಹತ್ವ ಹಾಗೂ ಸ್ಥಳೀಯ ಪಠ್ಯಕ್ರಮದ ರಚನೆಯಲ್ಲಿ ಪರಿಸರದ ಪಾತ್ರ ಮತ್ತು ಪರಿಸರದಿಂದ ಸಿದ್ಧಪಡಿಸಲಾದ ಪೂರಕ ಸಾಮಗ್ರಿಗಳ ಪ್ರಾಮುಖ್ಯತೆ ಹಾಗೂ ಅದರ ಅವಶ್ಯಕತೆಯನ್ನು ಅರ್ಥಮಾಡಿಕೊಳ್ಳಲು ನಾವು ಪ್ರಯತ್ನಿಸೋಣ.

## ಯೋಜನೆಯ ಪರಿಚಯ

2015-16 ನೇ ಸಾಲಿನಲ್ಲಿ ಈ ಯೋಜನೆಯು ಪ್ರಾರಂಭವಾಗಿದ್ದು, ಹಿಂದೂಸ್ತಾನ್‌ಜಿಂಕ್ (ವೇದಾಂತ ಗ್ರೂಪ್), ಸೇವಾ ಮಂದಿರ ಮತ್ತು ವಿದ್ಯಾ ಭವನ ಸೊಸೈಟಿ ಇವು ಮೂರು ಸಂಸ್ಥೆಗಳು ಈ ಯೋಜನೆಯ ಸಹಭಾಗಿಗಳಾಗಿದ್ದವು. ಈ ಯೋಜನೆಗೆ ಹಿಂದೂಸ್ತಾನ್‌ಜಿಂಕ್ ಹಣಕಾಸಿನ ನೆರವು ನೀಡಿದರೆ, ಸೇವಾ ಮಂದಿರವು ಅದಾಗಲೇ ಮಕ್ಕಳ ಆರೋಗ್ಯ ಮತ್ತು ಪೋಷಣೆಗಾಗಿ ಕೆಲಸ ಮಾಡುತ್ತಿತ್ತು. ಸೇವಾ ಮಂದಿರವು ಉದಯಪುರದ ಗ್ರಾಮೀಣ ಪ್ರದೇಶಗಳಲ್ಲಿ ಕೆಲಸ ಮಾಡುತ್ತಿರುವ ಪ್ರತಿಷ್ಠಿತ ಸಂಸ್ಥೆಯಾಗಿ ಗುರುತಿಸಿಕೊಂಡಿದೆ. ವಿದ್ಯಾ ಭವನ ಶಿಕ್ಷಣ ಪರಾಮರ್ಶೆ ಕೇಂದ್ರ (ಎಜುಕೇಶನ್ ರೆಫರೆನ್ಸ್ ಸೆಂಟರ್) ಎಂಬುದು ವಿದ್ಯಾ ಭವನ ಸೊಸೈಟಿಯ ಒಂದು ಭಾಗವಾಗಿದ್ದು, ದೇಶದ ಶಿಕ್ಷಣ ಕ್ಷೇತ್ರದಲ್ಲಿ ಚಿರಪರಿಚಿತ ಹೆಸರಾಗಿದೆ. ಈ ಯೋಜನೆಯಲ್ಲಿ ಅಂಗನವಾಡಿಗಳಲ್ಲಿ ಶಾಲಾಪೂರ್ವ ಶಿಕ್ಷಣದ ಕುರಿತು ಕೆಲಸ ಮಾಡುವ ಹೊಣೆಯನ್ನು ಶಿಕ್ಷಣ ಪರಾಮರ್ಶೆ ಕೇಂದ್ರಕ್ಕೆ ನೀಡಲಾಗಿತ್ತು. ಪ್ರಾರಂಭದಲ್ಲಿ ಈ ಕೆಲಸಕ್ಕಾಗಿ ಗಿರ್ವಾ ಮತ್ತು ಜಾಡೋಲ್ ಎಂಬ ಎರಡು ಬ್ಲಾಕ್‌ಗಳನ್ನು ನಿಗದಿಪಡಿಸಲಾಗಿತ್ತಾದರೂ ಮುಂದೆ ಅದನ್ನು ಐದು ಬ್ಲಾಕ್‌ಗಳಿಗೆ ವಿಸ್ತರಿಸಲಾಯಿತು. ಈ ಬ್ಲಾಕ್‌ಗಳಲ್ಲಿ ಶಾಲಾಪೂರ್ವ ಶಿಕ್ಷಣವನ್ನು ಸ್ಥಾಪಿಸುವ ಗುರಿಯನ್ನು ನಮಗೆ ನೀಡಲಾಗಿತ್ತು. ಈ ಗುರಿಯನ್ನು ಸಾಧಿಸುವ ಸಲುವಾಗಿ, ನಾವು ನಮ್ಮ ಕೆಲಸಕ್ಕೆ

ನಿಗದಿಯಾದ ಪ್ರದೇಶವನ್ನು ನೋಡಬೇಕಿತ್ತು ಹಾಗೂ ಅರ್ಥಮಾಡಿಕೊಳ್ಳಬೇಕಿತ್ತು. ಇದಕ್ಕಾಗಿ ನಾವು ಕ್ಷೇತ್ರ ಸಮೀಕ್ಷೆ ಕಾರ್ಯವನ್ನು ಪ್ರಾರಂಭಿಸಿದೆವು.

ಕ್ಷೇತ್ರ ಸಮೀಕ್ಷೆ: ಕ್ಷೇತ್ರ ಸಮೀಕ್ಷೆಯಲ್ಲಿ ಸ್ಥಿರಗೊಳಿಸಿದ ಪರಿಶೀಲನೆಗಳ ಕೆಲವು ಪ್ರಮುಖ ಅಂಶಗಳು ಈ ಕೆಳಗಿನಂತಿವೆ -

1- ಶಾಲಾಪೂರ್ವ ಶಿಕ್ಷಣಕ್ಕಾಗಿ ಅಂಗನವಾಡಿಗಳಲ್ಲಿ ನಡೆಯುತ್ತಿರುವ ಮೌಲ್ಯಮಾಪನ ಮಾಡುವುದು, 2- ಶಾಲಾಪೂರ್ವ ಶಿಕ್ಷಣದಲ್ಲಿ ನಡೆಯುತ್ತಿರುವ ಚಟುವಟಿಕೆಗಳನ್ನು ವೀಕ್ಷಿಸುವುದು, 3- ಶಾಲಾಪೂರ್ವ ಶಿಕ್ಷಣದ ಅಂಗನವಾಡಿ ನಿರ್ವಾಹಕರ ತಿಳುವಳಿಕೆಯನ್ನು ಅರ್ಥಮಾಡಿಕೊಳ್ಳುವುದು, 4- ಮಕ್ಕಳಿಗೆ ಬೋಧನೆ-ಕಲಿಕೆ ಸಾಮಗ್ರಿಗಳ ಲಭ್ಯತೆಯನ್ನು ಕಂಡುಹಿಡಿಯುವುದು, 5- ಆ ಪ್ರದೇಶದ ಸಾಮಾಜಿಕ ಹಾಗೂ ಸಾಂಸ್ಕೃತಿಕ ಸ್ಥಿತಿಗತಿಗಳನ್ನು ಅರ್ಥಮಾಡಿಕೊಳ್ಳುವುದು.

ಕ್ಷೇತ್ರ ಸಮೀಕ್ಷೆಯ ವೀಕ್ಷಣೆಯ ಸಂದರ್ಭದಲ್ಲಿ ನಾವು ಕಂಡುಕೊಂಡಿದ್ದೇನೆಂದರೆ-

1. ಶಾಲಾಪೂರ್ವ ಶಿಕ್ಷಣದ ಪ್ರತ್ಯಕ್ಷಾನುಭವಾತ್ಮಕ ತಿಳುವಳಿಕೆಯಿಂದ ಅಂಗನವಾಡಿ ಕೇಂದ್ರವು ಈಗಲೂ ಬಲು ದೂರದಲ್ಲಿತ್ತು. ಶಾಲೆಗಳಲ್ಲಿ ಕಲಿಸುವ ರೀತಿಯಲ್ಲೇ ಅಂಗನವಾಡಿಗಳಲ್ಲೂ ಬೋಧನಾ ಕಾರ್ಯವನ್ನು ಮಾಡಲಾಗುತ್ತಿತ್ತು. ಭಾಷೆ ಮತ್ತು ಗಣಿತವನ್ನು ಪ್ರಾಥಮಿಕ ಶಾಲೆಗಳಲ್ಲಿ ಹೇಗೆ ಕಲಿಸಲಾಗುತ್ತದೋ ಅದೇ ರೀತಿಯ ಕೆಲಸವನ್ನು ಇಲ್ಲೂ ಮಾಡಲಾಗುತ್ತಿತ್ತು, ಆದರೆ ಅದರಲ್ಲೂ ಕೂಡ ಯಾವುದೇ ನಿರಂತರತೆ ಇರಲಿಲ್ಲ.
2. ಬಹುತೇಕ ಅಂಗನವಾಡಿಗಳಲ್ಲಿ ಶಾಲಾಪೂರ್ವ ಶಿಕ್ಷಣದ ಯಾವುದೇ ಚಟುವಟಿಕೆ ಕಂಡುಬರಲಿಲ್ಲ, ಆದರೂ ಕೆಲವು ಅಂಗನವಾಡಿಗಳಲ್ಲಿ ಕೆಲವು ಹಾಡುಗಳು ಮತ್ತು ಕಥೆಗಳಿರುವುದು ಕಂಡುಬಂದವು. ಉದಾಹರಣೆಗೆ, ನೈತಿಕ ಬೋಧನೆಯ ಉದ್ದೇಶದಿಂದ ಹೇಳಲಾಗುತ್ತಿದ್ದ 'ಸಿಂಹ ಮತ್ತು ಮೊಲ'ದ ಕಥೆ ಹಾಗೂ "ಮಚಲೀ ಜಲ್ ಕೀ ರಾಣೀ ಹೈ, ಊಪರ್ ಫಂಖಾ ಚಲ್ತಾ ಹೈ, ಚೋಟೀಸಿ ಮುನ್ನಿ ಲಾಲ್ ಗುಲಾಬಿ ಚುನ್ನೀ" ಯಂಥ ಅನಾದಿ ಕಾಲದಿಂದಲೂ ಚಾಲ್ತಿಯಲ್ಲಿರುವ ಪದ್ಯಗಳು ಕೇಳಿಬರುತ್ತಿದ್ದವು.
3. ಮಾತನಾಡುವ, ಆಲಿಸುವ ಚಟುವಟಿಕೆಗಳನ್ನು ಒಳಗೊಂಡಂತೆ ಶಾಲಾಪೂರ್ವ ಶಿಕ್ಷಣದಲ್ಲಿ ಮಕ್ಕಳ ಭಾಷಿಕ ಸಾಮರ್ಥ್ಯದ ಬೆಳವಣಿಗೆಯನ್ನು ಎಲ್ಲಿಂದ ಮತ್ತು ಹೇಗೆ ಪ್ರಾರಂಭಿಸಬೇಕು ಎಂಬುದರ ಬಗ್ಗೆ ಅಂಗನವಾಡಿ ಕಾರ್ಯಕರ್ತೆಯರಿಗೆ ಅರಿವೇ ಇರಲಿಲ್ಲ.
4. ಅಂಗನವಾಡಿಗಳಲ್ಲಿ ಕೆಲವು ವರ್ಣಮಾಲೆಯ ಕೆಲವು ಚಿತ್ರಗಳು, ಪೌಷ್ಟಿಕಾಂಶ ಮತ್ತು ಸ್ವಚ್ಛತೆಯ ಪೋಸ್ಟರ್‌ಗಳನ್ನು ಹಾಕಲಾಗಿತ್ತು, ಅವು ಪೌಷ್ಟಿಕ ಆಹಾರ ವಿತರಣೆ ಮತ್ತು ಸ್ವಚ್ಛತೆಯ ಕುರಿತಾಗಿದ್ದವು ಹಾಗೂ ಕೆಲವು ಹಿಂದಿ ವರ್ಣಮಾಲೆಗಳು ಮತ್ತು ಹಣ್ಣಿನ ಹೆಸರುಗಳ ಚಾರ್ಟ್‌ಗಳು ಅಲ್ಲಿದ್ದವು. ಅಂಗನವಾಡಿ ಕಾರ್ಯಕರ್ತೆಯರು ಮತ್ತು ಸಹಾಯಕಿಯರೊಂದಿಗಿನ ನಡೆಸಿದ ಮಾತುಕತೆಯ ಸಂದರ್ಭದಲ್ಲಿ ಅವರ ಮುಖ್ಯ ಗಮನ ಪೌಷ್ಟಿಕ ಆಹಾರ ಮತ್ತು ಶುಚಿತ್ವಕ್ಕೆ ಮುಖ್ಯ ಒತ್ತು ನೀಡವುದಷ್ಟೇ ಆಗಿದೆ ಎಂಬ ಸತ್ಯ ತಿಳಿದುಬಂದಿತು. ಇದರ ಪರಿಣಾಮವಾಗಿ, ಅಂಗನವಾಡಿ ಕೇಂದ್ರದಲ್ಲಿ ಮಕ್ಕಳು ತಂಗಬೇಕಿತ್ತು, ಮಕ್ಕಳು ಕೇವಲ ಪೌಷ್ಟಿಕ ಆಹಾರ ವಿತರಣೆಯ ವೇಳೆಗಷ್ಟೇ ಕೇಂದ್ರಕ್ಕೆ ಬರುತ್ತಿದ್ದರು. ಹಾಗೂ ಪೌಷ್ಟಿಕ ಆಹಾರ ವಿತರಣೆಯ ನಂತರ ಮನೆಗೆ ಮರಳಲು ಪ್ರಾರಂಭಿಸುತ್ತಿದ್ದರು. ನಿಜ ಹೇಳಬೇಕೆಂದರೆ, ಅಂಗನವಾಡಿ ಕಾರ್ಯಕರ್ತೆಯರು ಮಕ್ಕಳನ್ನು ಅಲ್ಲೇ ತಂಗುವಂತೆ ಮಾಡಲು ಪ್ರಯತ್ನವನ್ನಂತೂ ಮಾಡುತ್ತಿದ್ದರು, ಆದರೆ ಹಾಗೆ ಅಲ್ಲಿ ಉಳಿಸಿಕೊಂಡ ಮೇಲೆ ಅವರ ಜತೆ ಇನ್ನೇನು ಮಾಡಬೇಕು, ಹೇಗೆ ಮಾಡಬೇಕೆಂದು ಗೊತ್ತಿರಲಿಲ್ಲ.

5. ಬುಡಕಟ್ಟು ಪ್ರದೇಶಗಳಾಗಿರುವ ಜಾಡೋಲ್ ಮತ್ತು ಕೊಟ್ರಾದಲ್ಲಿ ಅವರ ಭಾಷೆ ಮತ್ತು ಸಂಸ್ಕೃತಿಯು ಪ್ರತ್ಯೇಕ ಘಟಕದಂತೆ ಕಾಣಿಸುವುದು ನಮ್ಮ ಗಮನಕ್ಕೆ ಬಂದಿತ್ತು, ಆದರೆ ಗಿರ್ವಾ, ಮಾವ್ಲಿ ಮತ್ತು ಸರ್ದಾ ನಗರ, ಅರೆ-ನಗರ ಮತ್ತು ಗ್ರಾಮೀಣ ಪ್ರದೇಶಗಳ ಮಿಶ್ರ ಪ್ರದೇಶಗಳಾಗಿದ್ದವು.

## ಕಾರ್ಯಕ್ಷೇತ್ರದ ಹಿನ್ನೆಲೆ

ಸಮೀಕ್ಷೆಗಾಗಿ ಪಡೆದುಕೊಂಡ ನಮ್ಮ ಕಾರ್ಯ ಕ್ಷೇತ್ರವಾದ ಕೊಟ್ರಾದ ಹಿನ್ನೆಲೆ ಹೇಗಿತ್ತು ಎಂದು ನೋಡಿದರೆ, ಅದೊಂದು ಉದಯಪುರದ (ರಾಜಸ್ಥಾನ) ಗ್ರಾಮಾಂತರ ಪ್ರದೇಶವಾಗಿದೆ. ಅದರಲ್ಲೂ ಕೋಟಾಣಾ ಬ್ಲಾಕ್ ಹೇಗಿತ್ತೆಂದರೆ, ಅದರಲ್ಲಿ ಗಮೇತಿ, ಗರಾಸಿಯಾ, ಧಾವಡಿ, ಗುಜರಾತಿ ಮತ್ತು ಮೇವಾರಿ ಭಾಷೆಗಳನ್ನು ಮಾತನಾಡಲಾಗುತ್ತದೆ. ಈ ಬ್ಲಾಕ್‌ನ ಸಣ್ಣ ಭಾಗವನ್ನು ಹೊರತುಪಡಿಸಿದರೆ, ಪ್ರಮುಖವಾಗಿ ಅದು ಗಮೇತಿ ಮತ್ತು ಗರಾಸಿಯಾ ಎಂಬ ಹೆಸರಿನ ಆದಿವಾಸಿ ಬುಡಕಟ್ಟು ಜನರಿರುವ ಪ್ರದೇಶವಾಗಿದೆ. ಅಲ್ಲದೆ ಅದು ದಟ್ಟವಾದ ಕಾಡುಗಳಿಂದ ಆವೃತವಾಗಿದೆ ಮತ್ತು ಅದರ ದಕ್ಷಿಣ ಭಾಗವು ಗುಜರಾತ್‌ಗೆ ತಗುಲಿಕೊಂಡಿದೆ. ಅಸಲಿಗೆ, ಈ ಸಂಪೂರ್ಣ ಪ್ರದೇಶವು ಸಾಮಾಜಿಕವಾಗಿ, ಆರ್ಥಿಕವಾಗಿ ಮತ್ತು ಸಾಂಸ್ಕೃತಿಕವಾಗಿ ಮುಖ್ಯ ಭಾಗದಿಂದ ಸಂಪೂರ್ಣವಾಗಿ ಬೇರ್ಪಟ್ಟಿದೆ. ಅಂದರೆ ಅದು ಸಾಂಸ್ಕೃತಿಕವಾಗಿ ಮತ್ತು ಭಾಷಿಕವಾಗಿ ಮುಖ್ಯ ವಾಹಿನಿಯಿಂದ ಸಂಪೂರ್ಣವಾಗಿ ಸ್ವತಂತ್ರವಾಗಿದೆ. ಅಲ್ಲಿನ ಮುಖ್ಯ ಜನಸಮುದಾಯವನ್ನು ಗಮೇತಿ ಮತ್ತು ಗರಾಸಿಯಾ ಬುಡಕಟ್ಟುಗಳು ಎಂದು ಕರೆಯಲಾಗುತ್ತದೆ ಮತ್ತು ಅವರ ಭಾಷೆಯನ್ನು ಕೂಡ ಅವೇ ಹೆಸರುಗಳಿಂದ ಕರೆಯಲಾಗುತ್ತದೆ. ಅವರ ಭಾಷೆಯಲ್ಲಿ ಹಾಡುಗಳು ಮತ್ತು ಕವಿತೆಗಳು/ಕಥೆಗಳು ತುಂಬ ವಿಭಿನ್ನವಾಗಿವೆ. ಇಂದಿಗೂ ಅವರ ಸಂಸ್ಕೃತಿಯು ಅವರ ಸಂಪ್ರದಾಯಗಳಿಂದ ನಿಯಂತ್ರಣಕ್ಕೆ ಒಳಗಾಗಿವೆ. ಅವರು ತಮ್ಮದೇ ಆದ ಪಂಚಾಯತಿಗಳನ್ನು ಹೊಂದಿದ್ದು, ಅದು ಅವರ ಮೇಲೆ ಆಳ್ವಿಕೆ ಮಾಡುತ್ತದೆ. ಈ ಸಮುದಾಯಗಳು ಮಾತನಾಡುವ ಶೈಲಿಯೇ ಬೇರೆಯಾಗಿದ್ದು, ಅವರ ಮೌಖಿಕ ಭಾಷಾ ಪರಂಪರೆಯಲ್ಲಿ 'ಚ' ಎಂಬ ಅಕ್ಷರವೇ ಇಲ್ಲ. ಈ ಮಂದಿ 'ಚ' ದ ಬದಲಿಗೆ 'ಸ' ಎಂದು ಬಳಸುತ್ತಾರೆ. ಅಂದರೆ ಈ ಜನರು 'ಚಿತ್ರ'ವನ್ನು 'ಸಿತ್ರ' ಎಂದು ಕರೆಯುತ್ತಾರೆ. ನಮ್ಮ ಶಾಲಾಪೂರ್ವ ಮಕ್ಕಳು ಇದೇ ಸಮುದಾಯಗಳಿಗೆ ಸೇರಿದವರಾಗಿದ್ದು, ಅವರ ಮನೆ ಭಾಷೆ ಗಮೇತಿ, ಗಾರ್ಸಿಯಾ ಮತ್ತು ಧವಡಿ ಆಗಿದ್ದರೆ, ಅಂಗನವಾಡಿಯಲ್ಲಿ ಬೋಧನಾ ಭಾಷೆ ಹಿಂದಿಯಾಗಿತ್ತು.

## ಅಭಿಶಿಕ್ಷಣ ಪ್ರಮಾಣ ಮಾದರಿ

ನಾವು ಶಾಲಾಪೂರ್ವ ಶಿಕ್ಷಣದ ಪರಿಕಲ್ಪನೆಯನ್ನು ಅರ್ಥೈಸಿಕೊಳ್ಳುವ ಮೂಲಕ ಪ್ರಾರಂಭಿಸಬೇಕು ಎಂಬುದನ್ನು ನಾವು ಈ ಪರಿಶೀಲನೆಗಳ ನಂತರ ಖಚಿತವಾಗಿ ಹೇಳಬಹುದಾಗಿದೆ. ಇದಕ್ಕಾಗಿ ಪ್ರಮಾಣ ಮಾದರಿಗಳನ್ನು ಅಭಿವೃದ್ಧಿಪಡಿಸಲಾಗಿದೆ. ಮೂರು ವರ್ಷಗಳ ಈ ಯೋಜನೆಯಲ್ಲಿ, ನಾವು ಅಂಗನವಾಡಿ ಕಾರ್ಯಕರ್ತೆಯರಿಗಾಗಿ ಮೂರು ಪ್ರಮಾಣ ಮಾದರಿಗಳನ್ನು ರಚಿಸಿದ್ದೇವೆ, ಅವುಗಳಿಗೆ ಅಭಿಶಿಕ್ಷಣ (Orientation), ಪುನಶ್ಚೇತನ -1 (Refresher-1) ಮತ್ತು ಪುನಶ್ಚೇತನ -2 (Refresher-2) ಎಂದು ಹೆಸರಿಡಲಾಯಿತು. ಎಲ್ಲಾ ಹಂತಗಳಿಗೂ ಅಭಿಶಿಕ್ಷಣ ಪ್ರಮಾಣ ಮಾದರಿ (ಓರಿಯಂಟೇಶನ್ ಮಾಡ್ಯೂಲ್) ಮೂಲ ಘಟಕವಾಗಿದ್ದು, ಅದರಲ್ಲಿನ ಚರ್ಚೆಯ ಅಂಶಗಳು ಈ ಕೆಳಗಿನಂತಿದ್ದವು-

I) ನಿಮ್ಮ ಅನುಭವಗಳು, ಸವಾಲುಗಳು ಮತ್ತು ನಿರೀಕ್ಷೆಗಳು, ii) ಮಗುವಿನ ಕಲಿಕಾ ಸಾಮರ್ಥ್ಯಗಳು, III) ಶಾಲಾಪೂರ್ವ ಶಿಕ್ಷಣ/ವಿದ್ಯಾಭ್ಯಾಸ ಎಂದರೆ ಏನು? IV) ಸೃಜನಶೀಲತೆಯ ಸಾಮರ್ಥ್ಯಗಳ ಅಭಿವೃದ್ಧಿ, v) ಮಗುವಿನ ಪೂರ್ವ ಸಂಖ್ಯಾ ಪರಿಕಲ್ಪನೆಯ ಕುರಿತ ತಿಳುವಳಿಕೆಯನ್ನು ರೂಪಿಸುವುದು, VI) ಬಾಲ ವಿಕಾಸ: ಹಂತಗಳು ಮತ್ತು ಆಯಾಮಗಳು, VII) ಭಾಷೆಯ ಬೆಳವಣಿಗೆಯಲ್ಲಿ ಕಥೆ ಮತ್ತು ಪದ್ಯಗಳ ಪಾತ್ರ (ಇದಲ್ಲದೆ ಕವನ-ಕಥೆಯ ಬಗ್ಗೆ ಪ್ರತ್ಯೇಕ ಒಂದು ಗಂಟೆ ಅವಧಿಯ ಸೆಷನ್), VIII) ಚಟುವಟಿಕೆಗಳ ಬಗ್ಗೆ ಹಾಗೂ ವಯೋಮಾನಕ್ಕನುಗುಣವಾಗಿ ಮತ್ತು ಎಲ್ಲರಿಗೂ ಮಾಡಬಹುದಾದ ಅಂಗನವಾಡಿಯ ಬಗೆಗಿನ ಚಟುವಟಿಕೆಗಳು

IX) ಆರೋಗ್ಯ, ಪೋಷಣೆ ಮತ್ತು ನೈರ್ಮಲ್ಯ, X) ಸಕ್ರಿಯ ಅಂಗನವಾಡಿಗಳ ಬಗ್ಗೆ ತಿಳುವಳಿಕೆ, XI) ಕ್ರಿಯಾ ಯೋಜನೆಯನ್ನು ಸಿದ್ಧಪಡಿಸುವುದು.

ನಾವು ಇಲ್ಲಿ ಅಭಿಶಿಕ್ಷಣ ಪ್ರಮಾಣ ಮಾದರಿಯ ವಿಷಯ ವಸ್ತುಗಳನ್ನು ಚಿತ್ರಣವನ್ನು ನೀಡಿದ್ದೇವೆ. ಶಿಕ್ಷಣದ ಮೂಲಭೂತ ತಿಳುವಳಿಕೆಯನ್ನು ಅಭಿವೃದ್ಧಿಪಡಿಸಲು ಶಾಲಾಪೂರ್ವ ಶಿಕ್ಷಣವು ಸಹಾಯಕವಾಗಿರುತ್ತದೆ ಮತ್ತು ಅದು ನಮ್ಮ ಆರಂಭಿಕ ಅಂಶವಾಗಿರಲಿದೆ ಎನ್ನುವುದು ನಮ್ಮ ಆರಂಭಿಕ ತಿಳುವಳಿಕೆಯಾಗಿತ್ತು. ಈ ತಿಳುವಳಿಕೆಯು ವಿದ್ಯಾಭವನದ ಬೇರೆ ಬೇರೆ ನರ್ಸರಿ ಶಾಲೆಗಳ ಅನುಭವ ಮತ್ತು ಬೇರೆ ಬೇರೆ ಪಠ್ಯಕ್ರಮಗಳ ಅಧ್ಯಯನ ಹಾಗೂ ಬಳಸಿದ ಸಾಮಾಗ್ರಿಗಳ ಅಧ್ಯಯನದಿಂದ ರೂಪುಗೊಂಡಿತು.

ನಾವು ಅಂಗನವಾಡಿಗಳಲ್ಲಿ ಆರಂಭಿಸಲು ಪ್ರಸ್ತಾಪಿಸಲಾದ ವಿಷಯಗಳನ್ನು ಸಂಬೋಧಿಸಬೇಕಾಗಿದೆ ಹಾಗೂ ಅದನ್ನು ಪ್ರಾಯೋಗಿಕವಾಗಿ ಅನ್ವಯಿಸಬೇಕಾಗಿದೆ. ಮುಂದೆ ಯಾವುದೇ ಹೊಸ ಸವಾಲುಗಳು ಬಂದರೂ, ಅದನ್ನು ಪರಿಹರಿಸಬಹುದಾಗಿದೆ ಮತ್ತು ಪ್ರಾಯೋಗಿಕ ಅನುಭವಗಳನ್ನೂ ಅದರಲ್ಲಿ ಅಳವಡಿಸಬಹುದು. ಇವೇ ಮುಂದಾದ ವಿಷಯಗಳ ಕುರಿತು ನಾವು ನಮ್ಮ ಮೊದಲ ತರಬೇತಿಯನ್ನು ಮಾಡಿದೆವು. ಈ ತರಬೇತಿಯ ನಂತರವೇ ಶಾಲಾಪೂರ್ವ ಶಿಕ್ಷಣದ ಕೆಲಸದ ಮೇಲೆ ಪ್ರಜ್ಞಾಪೂರ್ವಕ ಹಾಗೂ ವ್ಯವಸ್ಥಿತವಾಗಿ ಆರಂಭ ಮಾಡಿದೆವು.

## ಶಾಲಾಪೂರ್ವ ಶಿಕ್ಷಣ ಕಾರ್ಯಗಳ ಪ್ರಾರಂಭ ಮತ್ತು ಭಾಷೆಗಳ ಸವಾಲುಗಳು

ಅಂಗನವಾಡಿಗಳಲ್ಲಿ ಶಿಶು ಗೀತೆಗಳು, ಕವನಗಳು ಮತ್ತು ಕಥೆಗಳೊಂದಿಗೆ ಕೆಲಸ- ಕಾರ್ಯಕರ್ತೆಯರು ತರಬೇತಿಯಿಂದ ಮರಳಿದ ಬಳಿಕ, ತಮ್ಮ ಅಂಗನವಾಡಿಗಳಲ್ಲಿ ಕಥೆಗಳು, ಹಾಡುಗಳು ಮತ್ತು ಇತರೆ ಶಿಶು ಗೀತೆಗಳನ್ನು ಸನ್ನೆಗಳ ಮೂಲಕ ಮಾಡಿಸಲು ಪ್ರಯತ್ನಿಸುತ್ತಿರುವುದು ಕಂಡುಬಂತು. ಕೆಲವರು ಹಿಂಜರಿಕೆಯಿಂದ ಮತ್ತು ಇನ್ನು ಕೆಲವರು ಆತ್ಮವಿಶ್ವಾಸದಿಂದ ಈ ಕೆಲಸ ಮಾಡುವುದು ಗಮನ ಸೆಳೆಯಿತು. ಕ್ರಮೇಣ ಅಂಗನವಾಡಿ ಕಾರ್ಯಕರ್ತೆಯರಲ್ಲಿ ಆತ್ಮವಿಶ್ವಾಸ ಮೂಡಲಾರಂಭಿಸಿತು. ಹೆಚ್ಚಿನ ಹಾಡುಗಳು ಮತ್ತು ಕಥೆಗಳನ್ನು ನಾವು ಅದಾಗಲೇ ಸಿದ್ಧಪಡಿಸಿದ್ದೆವು ಹಾಗೂ ಸಂಕಲಿಸಿದ್ದೆವು- ಇದರಲ್ಲಿ ಏಕಲವ್ಯ, ಎನ್‌ಬಿಟಿ, ಸಿಬಿಟಿ, ಪ್ರಥಮ್ ಮತ್ತು ಇನ್ನೂ ಕೆಲವು ಸ್ವತಂತ್ರ ಬರಹಗಾರರ ಮಕ್ಕಳ ಸಾಹಿತ್ಯದ ಕೃತಿಗಳಿಂದ ಸಂಕಲಿಸಿರುವುದೂ ಸೇರಿವೆ.

ಒಂದೆಡೆ ಈ ಚಟುವಟಿಕೆಗಳು ಆಗುತ್ತಿರುವಂತೆಯೇ ಮಕ್ಕಳು ಅಂಗನವಾಡಿಗಳಲ್ಲಿ ಉಳಿಯಲು ಆರಂಭಿಸಿದರು, ಮಕ್ಕಳು ಖುಷಿಯಿಂದ ಇರುವುದು ಗೋಚರಿಸಲಾರಂಭಿಸಿತು. ಈ ಪ್ರಯತ್ನವು ಹಳೆಯ ಪರಿಸ್ಥಿತಿಗಳನ್ನು ಮರೆಸಿ ಸಾಪೇಕ್ಷ ಅರ್ಥದಲ್ಲಿ ಅಂಗನವಾಡಿಗಳಿಗೆ ಕ್ರಿಯಾಶೀಲತೆಯನ್ನು ನೀಡಿದ್ದರೂ, ನಿಜವಾದ ಸವಾಲುಗಳು ಇನ್ನಷ್ಟೇ ಬರುವುದಿತ್ತು. ಏಕೆಂದರೆ ಈ ಚಟುವಟಿಕೆಯ ಪ್ರಗತಿಯು ಮುಂದಕ್ಕೆ ಸಾಗುವುದು ಕಾಣುತ್ತಿರಲಿಲ್ಲ. ಕ್ಷೇತ್ರ ಭೇಟಿಯ ಸಂದರ್ಭದಲ್ಲಿ ನಮಗೆ ಕೆಲವು ಸಂಕೇತಗಳು ಸಿಗಲು ಪ್ರಾರಂಭವಾಗಿತ್ತು ಹಾಗೂ ಅದನ್ನು ಅರ್ಥಮಾಡಿಕೊಳ್ಳುವುದು ಬಹಳ ಮುಖ್ಯವಾಗಿತ್ತು. “ಮೊದಲೆಲ್ಲ ಮಕ್ಕಳು ನಿಲ್ಲುತ್ತಿರಲಿಲ್ಲ. ಆದರೆ ಈಗ ಹಾವಭಾವದಿಂದ ಹಾಡು, ಕಥೆಗಳನ್ನು ಕೇಳತೊಡಗಿದ ಬಳಿಕ ನಿಲ್ಲತೊಡಗಿದ್ದಾರೆ” ಎಂದು ಕೊಟ್ರಾ ಬ್ಲಾಕ್ ಕೀಲಂಬಾಹಲ್ದು ಅಂಗನವಾಡಿಯ ಕಾರ್ಯಕರ್ತೆ ನಮಗೆ ಮಾಹಿತಿ ನೀಡಿದರು. “ಆದರೆ ಅವರು ಕೇವಲ ಒಂದೂವರೆ ಗಂಟೆ ಮಾತ್ರ ಉಳಿದುಕೊಳ್ಳುತ್ತಾರೆ ಹಾಗೂ ಬಳಿಕ ಇಲ್ಲೇ ಆಟವಾಡುತ್ತಾರೆ”. “ನೀವು ಎಷ್ಟು ಮತ್ತು ಯಾವ ಯಾವ ಹಾಡುಗಳನ್ನು ಹೇಳಿಕೊಡುತ್ತೀರಿ”ಎಂದು ಆಕೆಯನ್ನು ಪ್ರಶ್ನಿಸಿದಾಗ, “ಸರಾಸರಿ ಮೂರು ಹಾಡುಗಳು ಮತ್ತು ಒಂದು ಕಥೆಯನ್ನು ಹೇಳಿಕೊಡಬಲ್ಲೆ” ಎಂದು ಆಕೆ ಉತ್ತರಿಸಿದರು. “ಆಗ ನೀವು ಏನು ಮಾಡುತ್ತೀರಿ” ಎಂಬ ನಮ್ಮ ಪ್ರಶ್ನೆಗೆ,

ಆಕೆ "ನಾವು ನಮ್ಮ ಭಾಷೆಯಲ್ಲಿ ಹಾಡುಗಳನ್ನು ಹಾಡಿದಾಗ ಮಕ್ಕಳು ಹೆಚ್ಚು ಖುಷಿ ಪಡುತ್ತಾರೆ ಹಾಗೂ ಹೆಚ್ಚು ಕಾಲ ಅವರು ಉಳಿದುಕೊಳ್ಳುತ್ತಾರೆ" ಎಂದು ತುಂಬಾ ದೃಢವಾದ ಧ್ವನಿಯಲ್ಲಿ ಹೇಳಿದರು.

ಅದೇ ರೀತಿ, ಮಕ್ಕಳಿಗೆ ಹಾಡು, ಕಥೆಗಳು ಅರ್ಥವಾಗುತ್ತಿಲ್ಲ, ಆ ಬಳಿಕ ನಾವು ನಮ್ಮದೇ ಭಾಷೆಯಲ್ಲಿ (ಸ್ಥಳೀಯ ಭಾಷೆ) ಅವರಿಗೆ ಕಥೆ, ಹಾಡುಗಳನ್ನು ಹೇಳುತ್ತೇವೆ ಎಂಬ ಪ್ರತಿಕ್ರಿಯೆಗಳು ಇತರೆ ಅಂಗನವಾಡಿಗಳಿಂದಲೂ ಕೂಡ ಕೇಳಿಬಂದವು. ಕಥೆ/ಹಾಡುಗಳ ಬಳಕೆಯಿಂದ ಈ ಕೆಳಗಿನ ಸವಾಲುಗಳು ನಮ್ಮ ಮುಂದೆ ಕಾಣಿಸಿಕೊಂಡವು-

## ಸವಾಲುಗಳು -

ಪದಗುಚ್ಛಗಳು ದೀರ್ಘವಾಗಿದ್ದಂಥ ಹಾಡುಗಳನ್ನು ಅನುಸರಿಸಲು ಮಕ್ಕಳು ಕಷ್ಟಪಡತೊಡಗಿದ್ದರು, ಉದಾಹರಣೆಗೆ, ಟೇಸು ರಾಜಾ ಖಡೇ ಬಾಜಾರ್, ಸಂಭಾರ್ ಜೀಲ್ ಸೆ ಭರಾಯಾ ಭೈರು ಮಾರ್ವಾಡಿ ನೇ.

ಶಿಶು ಗೀತೆಗಳ ಲಭ್ಯತೆ ಕಡಿಮೆ ಇದ್ದುದರಿಂದ ಮಕ್ಕಳನ್ನು ಈ ಕಾರ್ಯದಲ್ಲಿ ಕ್ರಿಯಾಶೀಲವಾಗಿ ತೊಡಗಿಸಿಕೊಳ್ಳಲು ಕಾರ್ಯಕರ್ತೆಯರು ಹರಸಾಹಸ ಪಡಬೇಕಾಗುತ್ತಿತ್ತು.

ಇದರ ಪರಿಣಾಮವಾಗಿ, ಮಕ್ಕಳನ್ನು ಕ್ರಿಯಾಶೀಲವಾಗಿಡಲು ಆಕೆ ಸ್ಥಳೀಯ ಭಾಷೆಯಲ್ಲಿ ಹಾಡುಗಳು, ಕವಿತೆಗಳು ಮತ್ತು ಕಥೆಗಳನ್ನು ಕೇಳಿಸಿ ಮಕ್ಕಳನ್ನು ಕ್ರಿಯಾಶೀಲವಾಗಿರಿಸುತ್ತಿದ್ದರು, ಅಷ್ಟೇ ಅಲ್ಲದೆ ಮದುವೆಯ ಸಂದರ್ಭದಲ್ಲಿ ಹಾಡುವ ಹಾಡುಗಳು ಮತ್ತು ಬೇರೆ ಬೇರೆ ಧಾರ್ಮಿಕ ಸಂದರ್ಭಗಳಲ್ಲಿ ಹಾಡುವ ಹಾಡುಗಳ ಬಳಕೆಯನ್ನೂ ಮಾಡುತ್ತಿದ್ದರು.

ಅವರ ಪರಿಸರದಲ್ಲಿ ಹಿಂದಿ ಭಾಷೆಯ ಅಲಭ್ಯತೆಯಿಂದಾಗಿ, ಹಾಡುಗಳನ್ನು ಅರ್ಥಮಾಡಿಕೊಳ್ಳಲು ಮಕ್ಕಳಿಗೆ ಕಷ್ಟವಾಗುತ್ತಿತ್ತು ಹಾಗೂ ಇದರಿಂದಾಗಿ ಅವರಿಗೆ ಖುಷಿಯಾಗಲಿ/ಆಸಕ್ತಿಯಾಗಲಿ ಮೂಡುತ್ತಿರಲಿಲ್ಲ.

ಹಿಂದಿ ಭಾಷೆಯಲ್ಲಿ ಆಯ್ದ ಕಥೆಗಳು, ಹಾಡುಗಳು ಮತ್ತು ಶಿಶು ಗೀತೆಗಳೊಂದಿಗೆ ತೊಡಗಿಸಿಕೊಂಡಾಗ ಪಡೆದ ಅನುಭವಗಳನ್ನು ನಾವೀಗ ಇಲ್ಲಿ ಹಂಚಿಕೊಳ್ಳಲಿದ್ದೇವೆ -

1- 'ಸಂಭಾರ್ ಜೀಲ್ ಸೆ ಭರಾಯಾ ಭೈರು ಮಾರ್ವಾಡಿ ನೇ'…" ಎಂಬ ಈ ಹಾಡು ಹಿಂದಿ ಭಾಷೆಯಲ್ಲಿದ್ದರೂ ಅದು ರಾಜಸ್ಥಾನದ ಜಾನಪದ ಸಂಸ್ಕೃತಿಯ ಒಂದು ಭಾಗವಾಗಿದೆ. ಅದರಲ್ಲಿರುವುದು ದೇಸೀ ಸನ್ನಿವೇಶವಾಗಿದೆ ಮತ್ತು ಅದು ಸಾಮಾನ್ಯ ಗ್ರಾಮೀಣ ಜೀವನದ್ದಾಗಿದೆ. ಇದು ನಮ್ಮ ಗ್ರಾಮೀಣ ಸಂಸ್ಕೃತಿಯಾಗಿದ್ದು, ಇಲ್ಲಿ ಉಪ್ಪು ಅಥವಾ ಎಣ್ಣೆಯಂಥ ಸಣ್ಣ ಸಣ್ಣ ವಸ್ತುಗಳ ವ್ಯಾಪಾರವು ನಡೆಯುತ್ತಲೇ ಇರುತ್ತದೆ ಹಾಗೂ ಅದರ ಮಹತ್ವವನ್ನಿಲ್ಲಿ ತೋರಿಸಲಾಗಿದೆ. ಈ ಹಾಡು ಅದೇ ಜಾನಪದ ಸಂಸ್ಕೃತಿಯನ್ನು ಬಿಂಬಿಸುತ್ತದೆ. ಅಂಗನವಾಡಿ ಕಾರ್ಯಕರ್ತೆಯರಿಗೆ ಈ ಹಾಡು ತುಂಬಾ ಇಷ್ಟವಾಯಿತು. ಅವರು ಅದರ ಬಗ್ಗೆ ಸಾಕಷ್ಟು ತಯಾರಿ ನಡೆಸಿ ಅಂಗನವಾಡಿಗಳಲ್ಲಿ ಹಾವಭಾವದ ಮೂಲಕ ಅದನ್ನು ಪ್ರಸ್ತುತ ಪಡಿಸುತ್ತಿದ್ದರು. ಆದರೂ ಈ ಹಾಡು ಅಂಗನವಾಡಿ ಮಕ್ಕಳಿಗೆ ಇಷ್ಟವಾಗುತ್ತಿರಲಿಲ್ಲ, ಈ ಹಿನ್ನೆಲೆಯಲ್ಲಿ ಸಾಕಷ್ಟು ಪ್ರಯತ್ನಪಟ್ಟರೂ ಮಕ್ಕಳು ಆಸಕ್ತಿ ತೋರಿಸಲೇ ಇಲ್ಲ. ಹಾಗೆ ನೋಡಿದರೆ, ಅದು ವಯಸ್ಕರ ಸಂಧರ್ಭಕ್ಕೆ ಸೂಕ್ತವಾದರೂ 3 ರಿಂದ 6 ವರ್ಷದ ಮಕ್ಕಳಿಗೆ ಅದು ಸಂದರ್ಭವಲ್ಲ, ಇದು ಸ್ವಾಭಾವಿಕ ವಿಷಯವಾಗಿರುವುದನ್ನು ನಾವು ಅರ್ಥಮಾಡಿಕೊಂಡೆವು. ಇನ್ನೊಂದು ಸಾಧ್ಯತೆ ಏನೆಂದರೆ, ಅದು ಅವರ ಉಪಪ್ರಜ್ಞೆಯ ಮೇಲೆ ಪ್ರಭಾವವನ್ನು ಬೀರಲೂಬಹುದು ಹಾಗೂ ಅವರು ಸ್ವಲ್ಪ ಪ್ರಬುದ್ಧರಾದಾಗ ಅದು ಅವರ ಅರಿವಿಗೆ ಬರಬಹುದು.

2- 'ರಾಮ್ ನಾರಾಯಣ್ ಬಾಜಾ ಬಜಾತಾ' ... ಇದೊಂದು ಉದ್ದುದ್ದ ವಾಕ್ಯಗಳನ್ನು ಒಳಗೊಂಡಿದ್ದಂಥ ಹಾಡಾಗಿದ್ದರೂ ಮಕ್ಕಳಿಗೆ ಅದು ಬಹಳ ಇಷ್ಟವಾಗಿತ್ತು. ಅದು ಅವರಿಗೆ ಸಹಜವಾಗಿಯೇ ಇಷ್ಟವಾಗಿತ್ತು. ಈ ಹಾಡು ಬೇರೆ ಬೇರೆ ವಾದ್ಯೋಪಕರಣಗಳ ಹೆಸರುಗಳೊಂದಿಗೆ ಅಂದರೆ - 'ರಾಮ್ ನಾರಾಯಣ್ ಬಾಜಾ ಬಜಾತಾ ... ಢಂ ಢಂ ಢಂ ಡೋಲಕ್ ಬಜಾತಾ .... ಢಂ ಢಂ ಢಂ ಢಮರೂ ಬಜಾತಾ...' ಇಂಥ ತುಂಬ ಹುಮ್ಮಸ್ಸು ಮೂಡಿಸುವ ಧ್ವನಿಯು ಆ ಹಾಡಿನಲ್ಲಿ ಬೆರೆತಿದೆ. ಮಕ್ಕಳು ತಮ್ಮಿಷ್ಟದ ವಾದ್ಯೋಪಕರಣದ ಹೆಸರಿನೊಂದಿಗೆ ತಾವೂ ಧ್ವನಿಗೂಡಿಸಲು ಹಾಗೂ ಮತ್ತು ಹಾಡನ್ನು ಮುಂದುವರಿಸುವ ಸ್ವಾತಂತ್ರ್ಯವನ್ನು ಹೊಂದಿದ್ದರು.

3- 'ಟೇಸು ರಾಜಾ ಬೀಚ್ ಬಾಜಾರ್' - ಭಾರತದ ವಿವಿಧ ಪ್ರದೇಶಗಳಲ್ಲಿ ಸಾಮಾಜಿಕ, ಧಾರ್ಮಿಕ ಮತ್ತು ಸಾಂಸ್ಕೃತಿಕ ಜೀವನದಲ್ಲಿ ಹಾಸುಹೊಕ್ಕಾಗಿರುವ ಹೂವಿನ ಹೆಸರೇ ಟೇಸು (ಮುತ್ತುಗದ ಹೂವು). ಈ ಹೂವಿಗೆ ಸಂಬಂಧಿಸಿದ ಸಾಹಿತ್ಯಿಕ ಪುರಾವೆಗಳು ಮಹಾಭಾರತದ ಕಾಲದಿಂದಲೂ ಕಂಡುಬರುತ್ತವೆ, ಅದರೊಂದಿಗೆ ಅನೇಕ ದಂತಕಥೆಗಳು ಕೂಡ ಲಭ್ಯವಿವೆ. ಇದು ಮುತ್ತುಗ (ಕನ್ನಡ), ಮೊದುಗ(ತೆಲುಗು), ಮುರಿಕು, ಶಮತ(ಮಲಯಾಳಂ), ಟೇಸು, ಪಲಾಶ ಇತ್ಯಾದಿ ಹೆಸರುಗಳಿಂದ ಹಿಂದಿ, ಪಲಾಸು ಇತ್ಯಾದಿ ಹೆಸರುಗಳಿಂದ ಬೇರೆ ಬೇರೆ ಭಾಗಗಳಲ್ಲಿ ಚಿರಪರಿಚಿತವಾಗಿದೆ. ಇದರ ವಿವರಣೆಯು ಭಾರತದ ಇತರೆ ಪ್ರಾಚೀನ ಸಾಹಿತ್ಯಗಳಲ್ಲೂ ಲಭ್ಯವಿವೆ.

ಇದನ್ನು ರಾಜಸ್ಥಾನದ ಉದಯಪುರ ಪ್ರದೇಶದಲ್ಲಿ 'ಖಾಖರಾ' ಎಂದು ಕರೆಯಲಾಗುತ್ತದೆ. ಇದಕ್ಕೆ ಉತ್ತರ ಪ್ರದೇಶ, ಬಂಗಾಳ ಅಥವಾ ಒರಿಸ್ಸಾ ಇಲ್ಲವೇ ಕೇರಳದಲ್ಲಿ ಇರುವಂತಹ ಖ್ಯಾತಿಯು ಸಾಮಾನ್ಯ ಅಥವಾ ಶಿಕ್ಷಿತ ಜಗತ್ತಿನಲ್ಲಿ ಸಿಕ್ಕಿಲ್ಲ. ಈ ಪ್ರದೇಶದಲ್ಲಿ, "ಖಾಖರಾ" ಅಥವಾ ಟೇಸು ಹೂವು ಇಲ್ಲಿಯ ಜನಜೀವನದಲ್ಲಿ ಹೆಚ್ಚಿನ ಆರ್ಥಿಕ ಪ್ರಾಮುಖ್ಯತೆಯನ್ನು ಹೊಂದಿದೆ. ಇದರ ಎಲೆಗಳು ದೊನ್ನೆ ತಯಾರಿಸಲು, ಬಣ್ಣಗಳನ್ನು ತಯಾರಿಸಲು, ನೈಸರ್ಗಿಕ ಗುಲಾಲ್ ತಯಾರಿಸಲು ಇತ್ಯಾದಿಗಳಲ್ಲಿ ಬಳಕೆಯಾಗುತ್ತವೆ. ಜೊತೆಗೆ ಬಟ್ಟೆಗಳ ಬಣ್ಣಕ್ಕಾಗಿಯೂ ಹೆಚ್ಚಾಗಿ ಇದನ್ನು ಬಳಸಲಾಗುತ್ತದೆ. ಆದರೆ ಇಲ್ಲಿನ ಸಮುದಾಯದ ಸಾಮಾಜಿಕ ಪರಿಸರದಲ್ಲಿ ಅದು ಇತರೆ ಭಾಗಗಳ ಸಾಮಾಜಿಕ ಪರಿಸರದಲ್ಲಿ ಕಂಡುಬರುವಷ್ಟು ಒಳಗೊಳ್ಳುವಿಕೆಯನ್ನು ಹೊಂದಿರುವುದಿಲ್ಲ.

ಇದರಿಂದಾಗಿಯೇ ಈ ಹಾಡು/ಕಥೆ ಮಕ್ಕಳಿಗೆ ಪಥ್ಯವಾಗಿರಲಿಲ್ಲ, ಹಾಗೆಯೇ ಬ್ಲಾಕ್‌ನ ಸಾಧನಸೇವಿ ತಂಡ ಹಾಗೂ ಅಂಗನವಾಡಿ ಕಾರ್ಯಕರ್ತೆಯರಿಗೂ ಅದರು ಇಷ್ಟವಾಗಿರಲಿಲ್ಲ. ಆದರೆ ಮಕ್ಕಳಿಗೆ ಭಾಷಾ, ಗಣಿತ ಮತ್ತು ಕಲ್ಪನೆ ಮತ್ತು ಊಹಾ ಚಟುವಟಿಕೆಗಳನ್ನು ಮಾಡಲು ಅವಕಾಶವಿರುವುದಾಗಿ ಭಾವಿಸಿ ನಾವು ಆ ಹಾಡನ್ನು ಸೇರಿಸಿದ್ದೆವು.

ನಾವಿಲ್ಲಿ ಹಾಡು ಮತ್ತು ಕಥೆಯೊಂದಿಗೆ ನಮ್ಮ ಅನುಭವಗಳನ್ನು ಹಂಚಿಕೊಂಡಿದ್ದೇವೆ. ಈ ಅನುಭವಗಳು ನಮಗೆ ಮಕ್ಕಳ ಸಾಹಿತ್ಯದ ಬಳಕೆಯ ಕುರಿತು ಉತ್ತಮವಾದ ತಿಳುವಳಿಕೆಯನ್ನು ನೀಡಿದ್ದಲ್ಲದೆ, ಅತ್ಯುತ್ತಮವಾಗಿದೆ ಎಂದು ಪರಿಗಣಿಸಲಾದ ಎಲ್ಲ ಸಾಹಿತ್ಯವು ನಾಡಿನ ಎಲ್ಲಾ ಭಾಗಗಳಲ್ಲಿ ಒಂದೇ ಸಮಾನವಾಗಿ ಪರಿಣಾಮಕಾರಿಯಾಗಿರಬೇಕಿಲ್ಲ ಎಂಬುದನ್ನೂ ಮನವರಿಕೆ ಮಾಡಿಕೊಟ್ಟಿತ್ತು. ನಾವು ಮಕ್ಕಳಿಗೆ ಅಂತಹ ಮಕ್ಕಳ ಸಾಹಿತ್ಯವನ್ನೇ ನೀಡುವುದಿಲ್ಲ ಎಂಬುದು ಅದರ ಆಶಯವಲ್ಲ, ಆದರೆ ಅಂತಹ ವಿಷಯಗಳ ಪುಸ್ತಕವನ್ನು ಪುಸ್ತಕವಿಡುವ ಮೂಲೆಯಲ್ಲಿ ಅಥವಾ ತರಗತಿಯ ಗ್ರಂಥಾಲಯದಲ್ಲಿ ಖಂಡಿತಾಗಿಯೂ ಇಡಲಾಗುತ್ತದೆ, ಏಕೆಂದರೆ ಇದರಿಂದ ಮಕ್ಕಳ ಮುಂದೆ ವೈವಿಧ್ಯಮಯ ವಿಷಯಗಳಂತಲೂ ಸಿಗುವಂತಾಗುತ್ತದೆ.

ಈ ಅನುಭವವು ಮಕ್ಕಳ ಸನ್ನಿವೇಶವನ್ನು ಇನ್ನಷ್ಟು ಅರ್ಥಮಾಡಿಕೊಳ್ಳಲು ನಮಗೆ ಅವಕಾಶವನ್ನು ನೀಡಿತು ಹಾಗೂ ನಮ್ಮ ಕಂಡುಕೊಂಡ ವಿಚಾರಗಳು ಮಕ್ಕಳ ಮನೆ ಭಾಷೆ ಮತ್ತು ಪರಿಸರದ ಬಗ್ಗೆ ನಮ್ಮ ಜ್ಞಾನದ ಬೆಳವಣಿಗಾಗಿ

ಮಕ್ಕಳೊಂದಿಗೆ ಕೆಲಸ ಮಾಡಲು ನಮಗೆ ಸ್ಫೂರ್ತಿಯನ್ನು ಒದಗಿಸಿತು. ಹೀಗಾಗಿ, ಮಕ್ಕಳ ಮನೆ ಭಾಷೆಯಲ್ಲೇ ಕಥೆಗಳು ಮತ್ತು ಹಾಡುಗಳನ್ನು ಹುಡುಕಿ ತೆಗೆಯಲಾಯಿತು. ಜೊತೆಗೆ ಅಂಗನವಾಡಿಗಳಲ್ಲಿ ಕಾರ್ಯಕರ್ತೆಯರು ಬಳಸುತ್ತಿದ್ದ ಕಥೆ ಮತ್ತು ಹಾಡುಗಳನ್ನು ಕೂಡ ಸಂಗ್ರಹಿಸಲಾಯಿತು. ಆದರೆ ಇಲ್ಲಿಯೂ ಒಂದು ಸಮಸ್ಯೆ ಇತ್ತು - ಲಭ್ಯವಿದ್ದ ಎಲ್ಲಾ ಕಥೆಗಳಾಗಲಿ ಇಲ್ಲವೇ ಕವಿತೆಗಳಾಗಲಿ ಇಲ್ಲಿ ಹೊಂದಿಕೆಯಾಗುತ್ತಿರಲಿಲ್ಲ, ಹೀಗಾಗಿ ಇರುವುದರಲ್ಲೇ ಉತ್ತಮವಾದ ಕಥೆಗಳು ಮತ್ತು ಹಾಡುಗಳನ್ನು ತೆಗೆದುಕೊಳ್ಳಲಾಯಿತು ಹಾಗೂ ಮೂಲತಃ ಮನೆ ಭಾಷೆಯನ್ನು ಪ್ರಾಥಮಿಕವಾಗಿ ಬಳಸಲಾರಂಭಿಸಲಾಯಿತು. ಅದೇ ವೇಳೆ, ನಾವು ಸ್ಥಳೀಯ ಭಾಷೆಯಲ್ಲಾಗಲಿ ಅಥವಾ ಬೇರೆ ಭಾಷೆಯಲ್ಲಾಗಲಿ ಸವಾಲಾಗಬೇಕಾದ ಸಾಹಿತ್ಯಿಕ ವಸ್ತುವಿನ ಅದೇ ಮಾನದಂಡವನ್ನು ಇಲ್ಲೂ ಅಳವಡಿಸಿಕೊಂಡೆವು.

ಜೊತೆಜೊತೆಗೆ ಶಿಶು ಸಾಹಿತ್ಯ, ಸ್ಥಳೀಯ ಭಾಷೆಯಲ್ಲಿನ ಮಕ್ಕಳ ಹಾಡುಗಳು/ ಕವಿತೆಗಳನ್ನು ಹಿಂದಿಗೆ ಮತ್ತು ಹಿಂದಿ ಹಾಡುಗಳನ್ನು ಸ್ಥಳೀಯ ಭಾಷೆಗೆ ಭಾಷಾಂತರಿಸುವ ಕೆಲಸವನ್ನು ನಾವು ಮಾಡಿದೆವು. ಈ ರೀತಿ ಮಾಡುವುದರಿಂದ ಮಕ್ಕಳು ಹಾಡುಗಳು/ಪದ್ಯಗಳನ್ನು ಹಾಡುವುದನ್ನು ಆನಂದಿಸುವುದಷ್ಟೇ ಅಲ್ಲದೆ ಬೇರೆ ಭಾಷೆಗಳ ಕುರಿತಾದ ಭಯವೂ ಕಡಿಮೆಯಾಗುತ್ತಾ ಹೋಗುತ್ತದೆ ಎಂದು ನಾವು ಕಂಡುಕೊಂಡೆವು. ನಿಜ ಹೇಳಬೇಕೆಂದರೆ, ಇಂಗ್ಲಿಷ್ ಪದ್ಯಗಳ ಕುರಿತು ನಾವಿಲ್ಲಿ ಕಡಿಮೆ ಕೆಲಸ ಮಾಡಿದ್ದರೂ, ಮಕ್ಕಳಿಗೆ ಆ ಪದ್ಯಗಳನ್ನು ನೆನಪಿಟ್ಟುಕೊಳ್ಳಲು ಮತ್ತು ಸನ್ನೆಗಳೊಂದಿಗೆ ಹಾಡಲು ಅದರಿಂದ ಸುಲಭವಾಗುವಂತೆ ಕೆಲವು ಪದ್ಯಗಳನ್ನು ಹಿಂದಿ ಲಿಪಿಯಲ್ಲಿ ದಾಖಲಿಸಿದ್ದೆವು, ಅಲ್ಲದೆ ಅವುಗಳನ್ನು ಸ್ಥಳೀಯ ಭಾಷೆಗಳಾದ ಮೇವಾರಿ ಮತ್ತು ವಾಗಡಿ ಮಾತ್ರವಲ್ಲದೆ ಹಿಂದಿಗೂ ಅನುವಾದಿಸಲಾಯಿತು. ಇಂಗ್ಲಿಷ್ ಭಾಷೆಯೊಂದಿಗಿನ ಅವರ ಸೀಮಿತ ಒಡನಾಟವು ಮಕ್ಕಳೊಂದಿಗೆ ಕೆಲಸ ಮಾಡುವ ಸಂದರ್ಭ ಅವರ ಆತ್ಮವಿಶ್ವಾಸವನ್ನು ದುರ್ಬಲಗೊಳಿರುವುದು ಕಂಡುಬಂದಿದ್ದರಿಂದ ಅನೇಕ ಪದ್ಯಗಳನ್ನು ಹಾಡಿ ಮತ್ತು ರೆಕಾರ್ಡ್ ಮಾಡಿ ಕಳುಹಿಸಿಕೊಡಲಾಯಿತು. ಆದರೆ ಸ್ಥಳೀಯ ಭಾಷೆಯಲ್ಲಿ ಹಾಡುಗಳನ್ನು ಕಲಿಸುವುದು-ಕಲಿಯುವುದು ತುಂಬ ಮೋಜಿನಿಂದ ಕೂಡಿರುತ್ತಿತ್ತು, ಏಕೆಂದರೆ ಅದರ ಅರ್ಥವನ್ನು ಅವರು ಸುಲಭವಾಗಿ ತಿಳಿದುಕೊಳ್ಳಲು ಸಾಧ್ಯವಾಗುತ್ತಿತ್ತು-

ಇಂಗ್ಲಿಷ್ ಭಾಷೆ: Old Mac Donald Had A Farm Eya Eya O…

ಹಿಂದಿ ಲಿಪಿಯಲ್ಲಿ : ಓಲ್ಡ್ ಮೆಕ್ ಡೊನಾಲ್ಡ್ ಹ್ಯಾಡ್ ಅ ಫಾರ್ಮ್ ಈಯಾ ಈಯಾ ಒ…

ಸ್ಥಳೀಯ ಭಾಷೆ : ಮ್ಹಾರೆ ದಾದಾ ಜೀ ರೋ ಖೇತ್ ಓ ರೇ ಓ…

ಹಿಂದಿ ಭಾಷೆ : ಮೇರೆ ದಾದಾ ಜೀ ಕಾ ಖೇತ್ ಆ ರೆ ಆ …

ಸ್ಥಳೀಯ ಭಾಷೆ : ಮಿನ್ಕಿ ಮಿನ್ಕಿ ತೂ ಕಟೇ ರೇವೆ…

ಹಿಂದಿ ಭಾಷೆ : ಬಿಲ್ಲೀ ಬಿಲ್ಲೀ ತುಮ್ ಕಹಾ ರಹತೀ ಹೋ…

ಶಾಲಾಪೂರ್ವ ಶಿಕ್ಷಣದಲ್ಲಿ ಸ್ಥಳೀಯ ಅಥವಾ ಮನೆ ಭಾಷೆಯ ಬಳಕೆ ಅತ್ಯವಶ್ಯಕ ಹಾಗೂ ಅದಿಲ್ಲದೆ ಆರಂಭಿಕ ಶಿಕ್ಷಣವನ್ನು ಮುಂದಕ್ಕೆ ಒಯ್ಯುವುದು ಅಸಾಧ್ಯ ಎಂಬ ವಾಸ್ತವ ಚಿತ್ರಣವನ್ನು ನಾವು ಈ ಯೋಜನೆಯಲ್ಲಿ ಕೆಲಸ ಮಾಡುವಾಗ ಕಂಡುಕೊಂಡೆವು. ಅದಕ್ಕಾಗಿ ಸ್ಥಳೀಯ ವಸ್ತುವಿಷಯಗಳ ರಚನೆ ಮತ್ತು ಬಳಕೆ ಕೂಡ ಅತ್ಯವಶ್ಯವಾಗಿದೆ. ಬೋಧನಾ ಪ್ರಕ್ರಿಯೆಯು ಕೇವಲ ಮನೆ ಅಥವಾ ಸ್ಥಳೀಯ ಭಾಷೆಯನ್ನು ಸೇರಿಸುವುದಕ್ಕಷ್ಟೇ ಸೀಮಿತವಾಗಿರದೇ ಅದು ಸಾಮಾಜಿಕ-ಸಾಂಸ್ಕೃತಿಕ ಪರಿಸರವನ್ನು ಕೂಡ ಒಳಗೊಂಡಿರುತ್ತದೆ ಎನ್ನುವುದನ್ನು ಈ ಯೋಜನೆಯಲ್ಲಿ ಕೆಲಸ ಮಾಡುವ ಸಂದರ್ಭದಲ್ಲಿ ನಾವು ಅರಿತುಕೊಂಡೆವು.

## ಮನೆ ಭಾಷೆಯ ಬಳಕೆ ಪ್ರಾರಂಭ

ಮನೆ ಅಥವಾ ಸ್ಥಳೀಯ ಭಾಷೆಯ ಬಳಕೆ ಪ್ರಾರಂಭವಾದ ನಂತರ, ಮಕ್ಕಳು ಕೇಂದ್ರಗಳಲ್ಲಿ ಉಳಿಯಲು ಆಸಕ್ತಿ ತೋರಿಸುವ ಮೂಲಕ ಈ ಯತ್ನಕ್ಕೆ ಯಶಸ್ಸು ಸಿಕ್ಕರೂ, ಒಂದಿಷ್ಟು ಸಮಸ್ಯೆಗಳು ಕೂಡ ಗೋಚರಿಸಲಾರಂಭಿಸಿತು. ಅದರಲ್ಲೂ ಎರಡು ಆಯಾಮಗಳು ಸ್ಪಷ್ಟವಾಗಿ ಗೋಚರಿಸಿದವು. ಮೊದಲನೆಯದಾಗಿ, ಅಂಗನವಾಡಿಗಳಲ್ಲಿ ಪ್ರಾಥಮಿಕ ಭಾಷೆಯಾಗಿ ಮಕ್ಕಳ ಮನೆ ಭಾಷೆಯನ್ನೇ ಅನುಷ್ಠಾನಕ್ಕೆ ತರುವುದು ಮತ್ತು ಸ್ಥಳೀಯ ಭಾಷೆಯ ಬಗ್ಗೆ ಆತ್ಮವಿಶ್ವಾಸ ಮತ್ತು ತಿಳುವಳಿಕೆಯನ್ನು ಅಂಗನವಾಡಿ ಕಾರ್ಯಕರ್ತೆಯರಲ್ಲಿ ಬೆಳೆಸುವುದು. ಎರಡನೆಯದಾಗಿ, ಸ್ಥಳೀಯ ಅಥವಾ ಮನೆ ಭಾಷೆಯಲ್ಲಿ ಅಸ್ತಿತ್ವದಲ್ಲೇ ಇರದ ವಸ್ತುವಿಷಯವನ್ನು ಪೂರೈಸುವುದು.

ಇದಕ್ಕಾಗಿ ನಾವು ಕೆಲವು ಉತ್ತಮ ಸ್ಥಳೀಯ ಭಾಷೆಯ ಕಥೆಗಳು ಮತ್ತು ಹಾಡುಗಳನ್ನು ಸಂಗ್ರಹಿಸಿದೆವು - ಕಾಗ್ಲೋ ಮತ್ತು ಪರೇಬಾ (ಕಾಗೆ ಮತ್ತು ಪಾರಿವಾಳ, ಮಿಂಕಿ [ಬೆಕ್ಕಿನ ಕಥೆ ಮತ್ತು ಹಾಡು], ಇತ್ಯಾದಿ). ಅದೇ ರೀತಿ ಹಿಂದಿ ಹಾಡುಗಳನ್ನು ಸ್ಥಳೀಯ ಭಾಷೆಗೆ ಅನುವಾದಿಸಿದೆವು. ತಳಮಟ್ಟದಲ್ಲಿ ಅದೊಂದು ಸುಲಭದ ಕೆಲಸವಾಗಿರಲಿಲ್ಲ. ಅಂಗನವಾಡಿ ಕಾರ್ಯಕರ್ತೆಯರಲ್ಲಿ ಆತ್ಮವಿಶ್ವಾಸವನ್ನು ವೃದ್ಧಿಸುವುದು ನಿಜಕ್ಕೂ ಸವಾಲಾಗಿತ್ತು. ಮನೆ ಭಾಷೆಯಲ್ಲಿ ಕೆಲಸ ಮಾಡುತ್ತಲೇ ಉದ್ದೇಶಿತ ಭಾಷೆ ಅಥವಾ ಭಾಷೆಗಳಲ್ಲಿ ಪ್ರಾವೀಣ್ಯತೆಯನ್ನು ಸಾಧಿಸುವ ತಿಳಿವಳಿಕೆಗೆ ಸಂಬಂಧಿಸಿದಂತೆ ಅಂಗನವಾಡಿ ಕಾರ್ಯಕರ್ತೆಯರಿಗೆ ಇದು ಬಹುಭಾಷೆಗಳ ಪರಿಸರದಲ್ಲಿ ಆತ್ಮವಿಶ್ವಾಸದ ಪ್ರಶ್ನೆಯಾಗಿತ್ತು. ಅಂದರೆ, ಮಗುವಿನ ಮನೆ ಅಥವಾ ಸ್ಥಳೀಯ ಭಾಷೆಯನ್ನು ಹೇಗೆ ಬಳಸಬೇಕು ಮತ್ತು ಉದ್ದೇಶಿತ ಭಾಷೆಯನ್ನು ಸಾಧಿಸುವ ಮಾರ್ಗೋಪಾಯಗಳು ಯಾವುವು ಎಂಬುದರ ಕುರಿತು ಉತ್ತಮ ತಿಳುವಳಿಕೆಯನ್ನು ಪಡೆಯುವುದು ಇಲ್ಲಿ ಅನಿವಾರ್ಯವಾಗಿತ್ತು.

ಈ ಮೇಲಿನ ಪ್ರಶ್ನೆಯ ಒಂದು ಭಾಗವು ಸಂಘರ್ಷದ ಸನ್ನಿವೇಶವೂ ಆಗಿತ್ತು. ಏಕೆಂದರೆ, ಅಧಿಕೃತವಾಗಿ ಹಿಂದಿ ಶಿಕ್ಷಣದ ಭಾಷೆಯಾಗಿದೆ ಮತ್ತು ಮನೆ ಭಾಷೆಗೆ ಸಂಬಂಧಿಸಿದಂತೆ ಯಾವುದೇ ಮಾರ್ಗದರ್ಶನವಾಗಲಿ ಅಥವಾ ಪ್ರೋತ್ಸಾಹವಾಗಲಿ ಲಭ್ಯವಿರಲಿಲ್ಲ. ಇದರ ಜೊತೆಗೆ, ಎನ್‌ಸಿಎಫ್ 2005 ರಲ್ಲಿ ಈ ವಿಧಾನವನ್ನು ತಾತ್ವಿಕವಾಗಿ ತಿರಸ್ಕರಿಸಲಾಗಿದ್ದರೂ ಕೂಡ, ಶುದ್ಧ ಭಾಷೆ ಮತ್ತು ಶುದ್ಧ ಉಚ್ಚಾರಣೆಯ ಪದ್ಧತಿಯು ಶೈಕ್ಷಣಿಕ ಪ್ರಪಂಚದ ಮುಖ್ಯವಾಹಿನಿಯಲ್ಲಿ ಈಗಲೂ ಇದೆ.

ಇಂಥ ಪರಿಸ್ಥಿತಿಯ ನಡುವೆಯೂ ನಾವು ಮನೆ ಭಾಷೆಯೊಂದಿಗೆ ಕೆಲಸ ಮಾಡಲು ಪ್ರಾರಂಭಿಸಿದೆವು ಹಾಗೂ ಅದು ಆರಂಭವಾದ ಮೇಲೆ ಕ್ರಮೇಣ ಪರಿಸ್ಥಿತಿಯು ಸಕಾರಾತ್ಮಕವಾಗಿ ಬದಲಾಗತೊಡಗಿತು. ಕೇಂದ್ರಗಳಲ್ಲಿ ಮಕ್ಕಳು ಉಳಿದುಕೊಳ್ಳಲು ಪ್ರಾರಂಭಿಸಿದರು, ಮಕ್ಕಳು ಕೂಡ ಬಲು ಆಸಕ್ತಿಯಿಂದ ಚಟುವಟಿಕೆಗಳಲ್ಲಿ ತೊಡಗಿಸಿಕೊಳ್ಳಲು ಪ್ರಾರಂಭಿಸಿದರು. ಇದರಿಂದ ಅಂಗನವಾಡಿಗಳು ಕೂಡ ಸಕ್ರಿಯವಾಗಲು ಪ್ರಾರಂಭಿಸಿದವು. ನಿಜ ಹೇಳಬೇಕೆಂದರೆ, ಸಂಘರ್ಷದ ವಾತಾವರಣದ ಋಣಾತ್ಮಕ ಪರಿಣಾಮಗಳಿಂದ ನಮ್ಮನ್ನು ಮುಕ್ತಗೊಳಿಸಿದ್ದೇ ಈ ಚಟುವಟಿಕೆಗಳು. ಅಲ್ಲದೆ, ಈ ಸಂಬಂಧ ನಮ್ಮನ್ನು ಯಾರೂ ನೇರವಾಗಿ ಪ್ರಶ್ನಿಸುವುದಕ್ಕೆ ಬರಲಿಲ್ಲ.

- ಬಹುಭಾಷೆಗಳಲ್ಲಿ ಬೋಧನಾ ಪ್ರಕ್ರಿಯೆ - ನಾನಾ ತರಬೇತಿಗಳ ಮೂಲಕ ಮನೆ ಭಾಷೆಯನ್ನು ಹೇಗೆ ಬಳಸಬೇಕು ಎಂಬುದನ್ನು ಅಂಗನವಾಡಿ ಕಾರ್ಯಕರ್ತೆಯರಿಗೆ ಮನವರಿಕೆ ಮಾಡಿಕೊಡಲಾಯಿತು. ಮಿಶ್ರ

ಭಾಷಾ ಬೋಧನೆ ಅಥವಾ ಬಹುಭಾಷಾ ಬೋಧನೆಯ ಕುರಿತ ತಿಳುವಳಿಕೆ ಮತ್ತು ವಿಧಾನವನ್ನು ಕಟ್ಟಿಕೊಡುವುದು ತರಬೇತಿಯಲ್ಲಿ ನಮ್ಮ ಪ್ರಮುಖ ಆದ್ಯತೆ ಆಗಿತ್ತು

ಇದಕ್ಕಾಗಿ, ಒಂದೇ ಹಾಡಿನ ಚಾರ್ಟ್‌ಗಳನ್ನು ನಾವು ಎಲ್ಲಾ ಮೂರು ಭಾಷೆಗಳಲ್ಲಿ (ಹಿಂದಿ, ಇಂಗ್ಲಿಷ್ ಮತ್ತು ಮೇವಾರಿ/ಗಮೇತಿ/ಗರಾಸಿಯಾ) ತಯಾರಿಸಿದೆವು, ಜೊತೆಗೆ ಈ ಹಾಡುಗಳನ್ನು ಕೇಂದ್ರಗಳಲ್ಲಿ ಜಾರಿಗೆ ತಂದೆವು. ಹಿಂದಿ ಭಾಷೆಯ ಹಾಡುಗಳು/ಕಥೆಗಳನ್ನು ಹಿಂದಿ ಮತ್ತು ಸ್ಥಳೀಯ, ಹೀಗೆ ಎರಡೂ ರೂಪಗಳಲ್ಲಿ ಮತ್ತು ಹಿಂದಿಯಲ್ಲಿ ಮಾತನಾಡುವಾಗ ಸ್ಥಳೀಯ ಭಾಷೆಯ ಪದಗಳನ್ನು ಬಳಸಿಕೊಂಡು ಮಾಡಿಸಲಾರಂಭಿಸಿದೆವು.

“ಹೀಗೆ ಮಾಡುವ ಸಂದರ್ಭದಲ್ಲಿ, ಮಕ್ಕಳಿಗೆ ಎರಡೂ ಭಾಷೆಗಳಲ್ಲೂ ಆತ್ಮವಿಶ್ವಾಸ ಹುಟ್ಟಿಕೊಂಡಿತು ಹಾಗೂ ಅವರು ಎರಡೂ ಭಾಷೆಗಳಲ್ಲಿ ಧೈರ್ಯವಾಗಿ ಕೆಲಸ ಮಾಡಲು ಸಮರ್ಥರಾದರಲ್ಲದೆ, ಅವರೀಗ ಎರಡೂ ಭಾಷೆಗಳಲ್ಲಿ ಕಥೆ, ಹಾಡುಗಳನ್ನು ಹೇಳಲು ಶಕ್ತರಾದರು. ಅವರು ತಮ್ಮ ಮನೆ ಭಾಷೆಯನ್ನು ಕೇಂದ್ರಗಳಲ್ಲಿ ಮಾತನಾಡಲಾರಂಭಿಸಿದರು. ಹಿಂದಿ ಭಾಷೆಯಲ್ಲಿ ಮಾತನಾಡುವಾಗ ತಮ್ಮ ಸ್ವಂತ ಭಾಷೆಯ ಪದಗಳನ್ನು ಬಳಸಲು ಸಂಕೋಚ ಪಡುತ್ತಿರಲಿಲ್ಲ. ಆಗ ಅವರ ಆತ್ಮವಿಶ್ವಾಸ ನಿಜಕ್ಕೂ ನೋಡಲು ಯೋಗ್ಯವಾಗಿತ್ತು.”

ಹಾಗೂ ಈ ಪ್ರಾಯೋಗಿಕ ಪ್ರಯೋಗದಿಂದಾಗಿ, "ಶುದ್ಧ ಎನ್ನಬಹುದಾದ ಯಾವುದೇ ಭಾಷೆಯಿಲ್ಲ, ಜಗತ್ತಿನ ಎಲ್ಲಾ ಭಾಷೆಗಳು ಸಮ್ಮಿಶ್ರವಾಗಿವೆ" ಎಂದು ನಾವು ಅರ್ಥಮಾಡಿಕೊಂಡೆವು (ಪ್ರೊ. ಅಗ್ನಿಹೋತ್ರಿ 2019-20). ನಮ್ಮ ಕಾರ್ಯಕ್ಷೇತ್ರದಲ್ಲಿ ಗಮೇತಿ ಮತ್ತು ಗರಾಸಿಯಾ ಭಾಷೆಯನ್ನು ಮಾತನಾಡುತ್ತಾರಾದರೂ ದೈನಂದಿನ ಜೀವನದಲ್ಲಿ ಹಿಂದಿ, ಗುಜರಾತಿ, ಮೇವಾರಿ, ಬಾಗ್ದಿ, ಇಂಗ್ಲಿಷ್ ಪದಗಳನ್ನು ಕೂಡ ವ್ಯಾಪಕವಾಗಿ ಬಳಸಲಾಗುತ್ತದೆ. ಪ್ರಪಂಚದ ಎಲ್ಲಾ ಭಾಷೆಗಳಲ್ಲೂ ಈ ಬೆರಕೆಯು ಮಿಳಿತಗೊಂಡಿದೆ. ಹಾಗಂತ, ಇದೊಂದು ಸಮಸ್ಯೆಯಲ್ಲ, ಬದಲಿಗೆ ಅದು ಭಾಷಾ ಶ್ರೀಮಂತಿಕೆಯಾಗಿದೆ ಹಾಗೂ ಇದು ನಮಗೆ ಅನೇಕ ಭಾಷೆಗಳನ್ನು ಕಲಿಯಲು ನೆರವಾಗುತ್ತದೆ.
ಅಷ್ಟಾದರೂ ಈ ಪ್ರಯೋಗ ಮತ್ತು ಅದರ ಯಶಸ್ಸಿನೊಂದಿಗೆ, ನಾವು ಟೀಕೆಗಳನ್ನು ಕೂಡ ಎದುರಿಸುವಂತಾಯಿತು. ಅದರಲ್ಲೂ ವಿಶೇಷವಾಗಿ ಉತ್ತಮ ಆರ್ಥಿಕ ಸ್ಥಿತಿ ಹೊಂದಿರುವ, ಖಾಸಗಿ ನರ್ಸರಿ ಶಾಲೆಗೆ ಹೋಗುವ ಮಕ್ಕಳ ಕುಟುಂಬಗಳಿಂದ ಟೀಕೆಗಳನ್ನು ಕೇಳಿಸಿಕೊಳ್ಳುವಂತಾಯಿತು. ಈ ಮಂದಿ ಮಗುವಿನ ಮನೆ ಭಾಷೆಯನ್ನು ಕಲಿಸುತ್ತಾರೆ, ಆದರೆ ಅವರು ಮುಂದೆ ಓದಬೇಕಿರುವುದು ಹಿಂದಿಯಲ್ಲಿ ಮತ್ತು ನಂತರ ಇಂಗ್ಲಿಷ್‌ನಲ್ಲಿ ಎಂಬುದು ಅವರ ಟೀಕೆಯಾಗಿತ್ತು. ಅಲ್ಲದೆ ಈ ಮಂದಿ ಭಾಷೆಯನ್ನು ಮಲಿನಗೊಳಿಸುತ್ತಿದ್ದಾರೆ. ಈ ಕುಟುಂಬಗಳ ಮಕ್ಕಳು ಓದುವ ಖಾಸಗಿ ಶಾಲೆಗಳು ಇಂಥ ವಿಚಾರಗಳನ್ನು ಹರಡಲಾರಂಭಿಸಿದವು. ನಾವು ನಮ್ಮ ತರಬೇತಿಯಲ್ಲಿ ಅಂಥ ಆಲೋಚನೆಗಳನ್ನು ಹೋಗಲಾಡಿಸಿದೆವು ಹಾಗೂ ಭಾಷಾ ಬೋಧನೆಯ ಬಹುಭಾಷಾ ಪ್ರಕ್ರಿಯೆಯನ್ನು ಜಾರಿಗೆ ತಂದೆವು.

ಶುದ್ಧ ಭಾಷೆ - ಶುದ್ಧ ಭಾಷೆ ಹಾಗೂ ಶುದ್ಧ ಉಚ್ಚಾರಣೆಯ ಬಗ್ಗೆ ಹೆಚ್ಚಿನ ಒತ್ತು ನೀಡುವ, ಅಕ್ಷರಗಳನ್ನು ಗುರುತಿಸುವಿಕೆ ಮತ್ತು ಮಾತ್ರೆಗಳನ್ನು ಕಂಠಪಾಠ ಮಾಡಿ ಭಾಷೆಯನ್ನು ಕಲಿಯುವುದನ್ನು ಪ್ರತಿಪಾದಿಸುವ ಒಂದು ದೊಡ್ಡ ಗುಂಪು ಈಗಲೂ ನಮ್ಮ ಸಮಾಜದಲ್ಲಿದೆ. ಉದಾಹರಣೆಗೆ, ಹಿಂದಿ ಭಾಷೆಯನ್ನು ತೆಗೆದುಕೊಂಡರೆ, ಶುದ್ಧ ಭಾಷೆ ಮತ್ತು ಸರಿಯಾದ ಉಚ್ಚಾರಣೆ ಹಾಗೂ ವ್ಯಾಕರಣವನ್ನೇ ಕಲಿಯಬೇಕೆಂದು ಅವರು ಆಗ್ರಹಿಸುತ್ತಾರೆ. ಶುದ್ಧ ಹಿಂದಿ ಎಂದರೆ ಸಂಸ್ಕೃತಮಯ ಹಿಂದಿ ಭಾಷೆ ಮಾತನಾಡುವುದು ಮತ್ತು ಬರೆಯುವುದು ಎಂದರ್ಥ. ಆದರೆ ಸತ್ಯವೇನೆಂದರೆ ಹಿಂದಿ ಭಾಷೆಯು ಬ್ರಜ್, ಅವಧಿ, ಭೋಜ್‌ಪುರಿ, ಮಗಹೀ, ಬಜ್ಜಿಕಾ, ಅಂಗಿಕಾ ಮುಂತಾದ ಆಡುಭಾಷೆಗಳು ಸೇರಿದಂತೆ

ಹಿಂದೂಸ್ತಾನಿ, ಪಂಜಾಬಿ ಮತ್ತು ಸಂಸ್ಕೃತ, ಅರೇಬಿಕ್, ಪರ್ಷಿಯನ್ ಹಾಗೂ ಇಂಗ್ಲಿಷ್ ಮುಂತಾದ ಭಾಷೆಗಳ ಪದಗಳನ್ನು ಒಳಗೊಂಡಿದೆ ಎಂಬುದು ಸತ್ಯವಾಗಿದೆ. ಈ ಭಾಷೆಗಳ ಸಮ್ಮಿಳನದಿಂದಾಗಿ ನಿಘಂಟಿನ ರಚನೆ ಸಾಧ್ಯವಾಗಿದ್ದು ಮಾತ್ರವಲ್ಲದೆ, ವಿವಿಧ ರೂಪಗಳಲ್ಲಿ ಶೈಲಿಗಳೂ ವಿಕಸನಗೊಂಡವು. ಆಷ್ಟಾದರೂ ಈ ಮಂದಿ ಶುದ್ಧ ಭಾಷೆಗಾಗಿ ಆಗ್ರಹಿಸುತ್ತಾರೆ.

ಮಿಶ್ರ ಭಾಷೆಗಳ ಹಂತ - ಯಾವುದೇ ಭಾಷೆಯನ್ನು ಕಲಿಯಬೇಕಾದರೆ, ಕೇಂದ್ರದಲ್ಲಿ ಆ ಭಾಷೆಗೆ ಪೂರಕ ಪರಿಸರವನ್ನು ನಿರ್ಮಿಸುವುದು ಅತ್ಯವಶ್ಯಕವಾಗಿದೆ (ಪ್ರೊ. ಅಗ್ನಿಹೋತ್ರಿ) ಹಾಗೂ ಸ್ವಂತ ಭಾಷೆ ಮತ್ತು ಉದ್ದೇಶಿತ ಭಾಷೆಯ ಪದಗಳ ನಡುವೆ ತುಲನಾತ್ಮಕ ಚರ್ಚೆ ಮತ್ತು ಸಂಭಾಷಣೆಯನ್ನು ಆರಂಭಿಕ ಹಂತದಲ್ಲೇ ಪರಿಚಯಿಸುವುದು ಅತ್ಯವಶ್ಯಕ. ಇಷ್ಟಲ್ಲದೆ ಪರಿಸರದಲ್ಲಿ ಮಾತನಾಡುವ ಅಷ್ಟೂ ಭಾಷೆಗಳಿಗೆ ತರಗತಿಯಲ್ಲಿ ಸ್ಥಾನ ನೀಡಬೇಕಾಗಿದೆ. ಅರ್ಥಾತ್, ಮನೆ ಮತ್ತು ಪರಿಸರದಲ್ಲಿ ಬಳಸುವ ಭಾಷೆಗೆ ಸ್ಥಾನ ನೀಡುವ ಮೂಲಕ ಉದ್ದೇಶಿತ ಭಾಷೆಯ ಕಡೆಗೆ ಸಾಗಬೇಕಾಗಿದೆ. ಉದ್ದೇಶಿತ ಭಾಷೆಯನ್ನು ಕಲಿಯುವ ಸಂದರ್ಭದಲ್ಲಿ ಮನೆ ಭಾಷೆಗಳ ಬಳಕೆಗೆ ಅವಕಾಶಗಳನ್ನು ನೀಡಬೇಕು. ಅಂತಹ ಸನ್ನಿವೇಶದಲ್ಲಿ, ಮಕ್ಕಳು ಎರಡೂ ಭಾಷೆಗಳನ್ನು ಮಿಶ್ರಣ ಮಾಡಿ ಮಾತನಾಡಲು ಪ್ರಾರಂಭಿಸುವ ಒಂದು ಹಂತವೂ ಬರುತ್ತದೆ. ಹೀಗೆ ಮಾಡುವುದರಿಂದ ಮಕ್ಕಳಿಗೆ ತಮ್ಮ ಮನೆ ಭಾಷೆ ಮತ್ತು ಇತರೆ ಭಾಷೆಗಳಲ್ಲಿ ಪ್ರಭುತ್ವ ಲಭ್ಯವಾಗುತ್ತದೆ ಹಾಗೂ ಮಕ್ಕಳು ಅದನ್ನು ಅತ್ಯಂತ ಸುಲಭವಾಗಿ ಸಹಜವಾಗಿ ಅದನ್ನು ಸಾಧಿಸುತ್ತಾರೆ. ಇದಕ್ಕಾಗಿ ಅವರು ವ್ಯಾಕರಣವನ್ನು ಕಲಿಯುವ ಅಗತ್ಯವೇನೂ ಇರುವುದಿಲ್ಲ, "ಮಕ್ಕಳಿಗೆ ವ್ಯಾಕರಣವನ್ನು ಕಲಿಯುವ ಸಾಮರ್ಥ್ಯವು ಜನ್ಮಜಾತವಾಗಿ ಬಂದಿರುತ್ತದೆ" ಎಂದು ಸಾರ್ವತ್ರಿಕ ವ್ಯಾಕರಣ ಸಿದ್ಧಾಂತದ ಪ್ರತಿಪಾದಕ ನೋಮ್ ಚೊಮೊಸ್ಕಿ ಹೇಳಿದ್ದಾರೆ.

ಮಿಶ್ರ ಭಾಷೆಯ ಗ್ರಾಹ್ಯತೆ - ಭಾಷಾ ಶುದ್ಧತೆ ಎಂಬುದು ಹರಡಲಾಗಿರುವ ಒಂದು ಕಾಲ್ಪನಿಕ ಸಂಗತಿಯಾಗಿದ್ದು, ಈ ಜಗತ್ತಿನಲ್ಲಿ ಮಾತನಾಡುವ ಎಲ್ಲಾ ಭಾಷೆಗಳು ಸಮ್ಮಿಶ್ರವಾಗಿವೆ. ಆಷ್ಟಾದರೂ ಶುದ್ಧ ಭಾಷೆಗಳು, ಭಾಷೆಗಳು ಮತ್ತು ಪದಗಳು ತಮ್ಮದೇ ಆದ ಯಾನವನ್ನು ಹೊಂದಿವೆ. ಉದಾಹರಣೆಗೆ, ಇಂಗ್ಲಿಷಿನಲ್ಲಿ ಅನೇಕ ಭಾಷೆಗಳ ಪದಗಳು ಕಂಡುಬರುತ್ತವೆ. ಅದು ನಮ್ಮದೇ ಸ್ವಂತ ಭಾಷೆಯ ಹಲವಾರು ಪದಗಳನ್ನು ಒಳಗೊಂಡಿದೆ ಮತ್ತು ಅದು ಹಲವಾರು ಭಾಷೆಗಳನ್ನು ಒಳಗೊಳ್ಳುತ್ತಾ ತನ್ನನ್ನು ತಾನು ಸಮೃದ್ಧಗೊಳಿಸಿಕೊಂಡಿದೆ. ಬಹುಭಾಷಿಕತೆಯು ನಮ್ಮ ದೇಶದ ಮತ್ತು ಸಮಾಜದ ಸ್ವಾಭಾವಿಕ ಗುಣವಾಗಿದೆ. ನಮ್ಮಲ್ಲಿ ಅವೆಷ್ಟು ಭಾಷೆಗಳನ್ನು ಮಾತನಾಡಲಾಗುತ್ತದೋ ಆದರೂ ಸಂವಹನಕಾರರು ಅಲ್ಲಿಗೇ ನಿಲ್ಲುವುದಿಲ್ಲ ಮತ್ತು ಈ ದೃಷ್ಟಿಕೋನವು ನಮ್ಮದೂ ಕೂಡ ಆಗಿರಬೇಕು.

## ಮನೆ ಭಾಷೆ ಮತ್ತು ಪರಿಸರ- ಜ್ಞಾನ ಸೃಷ್ಟಿಯ ತಳಹದಿ

ಆರಂಭದ ಶಿಕ್ಷಣದಲ್ಲಿ ಮನೆ ಭಾಷೆಯ ಉಪಯೋಗವು ಕೇವಲ ಒಂದು ಬೋಧನಾ ಪದ್ಧತಿಯಷ್ಟೇ ಅಲ್ಲ, ಯಾವುದೇ ಮಗು ತನ್ನ ಜ್ಞಾನ ಬೆಳವಣಿಗೆಯ ಸಂದರ್ಭದಲ್ಲಿ ತನ್ನ (ಮನೆ) ಭಾಷೆಯಲ್ಲೇ ಯೋಚಿಸುತ್ತದೆ ಇಲ್ಲವೇ ಸಂವಹನ ನಡೆಸುತ್ತದೆ. ಅವರು ತಮ್ಮ ಕಲ್ಪನೆ ಹಾಗೂ ಅಭಿವ್ಯಕ್ತಿಯನ್ನು ತಮ್ಮದೇ ಭಾಷೆಯಲ್ಲಿ ಮಾಡುತ್ತಾರೆ. ಜ್ಞಾನ ಸೃಷ್ಟಿಯ ವಿಚಾರದಲ್ಲಿ ಇದರ ಹೊರತಾಗಿ ಯಾವುದರ ಬಗೆಗೂ ಯೋಚಿಸಲೂ ಕೂಡ ಸಾಧ್ಯವಿಲ್ಲ. ಈ ಭಾಷೆಯು ಕೇವಲ ಕೊಡು-ಕೊಳ್ಳುವ ಮಾಧ್ಯಮ ಅಲ್ಲ, ಬದಲಿಗೆ ಅದು ಅವರ ಆಲೋಚನೆಗಳು ಹಾಗೂ ಕಲ್ಪನೆಗಳ ಭಾಷೆಯೂ ಆಗಿದೆ ಎಂಬ ತಿಳುವಳಿಕೆಯನ್ನು ನಮಗೆ ಈ ಯೋಜನೆಯು ನೀಡಿತು.

ಇದೇ ಪರಿಸ್ಥಿತಿ ಪರಿಸರದ ಅಧ್ಯಯನದ್ದೂ ಆಗಿದೆ- ಭೌತಿಕ ತತ್ತ್ವಶಾಸ್ತ್ರದ ಚಿಂತನೆಯಲ್ಲಿ, ಮೂಲಭೂತವಾಗಿ ಪ್ರಜ್ಞೆ ಇಲ್ಲವೇ ಜ್ಞಾನವು ಭೌತಿಕ ಪರಿಸರದಲ್ಲಿ ರೂಪುಗೊಳ್ಳುತ್ತದೆ ಎಂದು ಹೇಳಲಾಗುತ್ತದೆ. ಇಲ್ಲಿ ಪರಿಸರ ಎಂಬುದು ಪ್ರಾಕೃತಿಕ, ಸಾಮಾಜಿಕ-ಆರ್ಥಿಕ ಮತ್ತು ಸಾಂಸ್ಕೃತಿಕ ಮಾತ್ರವಲ್ಲದೆ, ಭಾಷಾ ಪರಿಸರವನ್ನೂ ಒಳಗೊಂಡಿರುತ್ತದೆ. ಈ ಯೋಜನೆಯಲ್ಲಿ ಕೆಲಸ ಮಾಡುವ ಸಂದರ್ಭದಲ್ಲಿ ನಾವು ಈ ವಿಚಾರವನ್ನು ಬಹಳ ಗಂಭೀರವಾಗಿಯೇ ಅರಿತುಕೊಂಡೆವು. ಏಕೆಂದರೆ ಅದರ ತಳಹದಿಯ ಮೇಲಷ್ಟೇ ನಾವು ಮುಂದೆ ಸಾಗಲು ಸಾಧ್ಯವಿತ್ತು. ಅಲ್ಲದೆ ಇದೇ ಆಧಾರದ ಮೇಲೆ ನಮ್ಮ ಯೋಜನೆಯು ಯಶಸ್ಸಿನ ಹಾದಿ ಹಿಡಿದಿತ್ತು. ಮನೆ ಭಾಷೆಯ ಪ್ರಯೋಗದಿಂದ ಶುರುವಾದ ಈ ಕಥೆಯು ಸುತ್ತಮುತ್ತಲಿನ ಪರಿಸರದಿಂದ ಜ್ಞಾನದ ಸೃಷ್ಟಿಯ ಕಡೆಗೆ ಬಲವಾಗಿ ಮುಂದುವರಿದಿತ್ತು. ಹಾಗೂ ನೆಲದ ಮೇಲಿನ ನಮ್ಮ ಈ ಅನುಭವಗಳು ಪರಿಸರದ ಅಧ್ಯಯನವನ್ನು ಒಂದು ಸ್ತಂಭವನ್ನಾಗಿ ರೂಪಿಸಿದ್ದಲ್ಲದೆ, ಅವು ಶಾಲಾಪೂರ್ವ ಮಕ್ಕಳ ಪಠ್ಯಕ್ರಮದ ನಿಗದಿ ಮತ್ತು ರಚನೆಯಲ್ಲಿ ನಮಗೆ ಮಾರ್ಗದರ್ಶನವನ್ನೂ ಮಾಡಿತು.

ಶಾಲಾಪೂರ್ವ ಶಿಕ್ಷಣದ ಆಯಾಮಗಳ ಕ್ರಮಬದ್ಧ ವಿಸ್ತರಣೆ ಹಾಗೂ ಪಠ್ಯಕ್ರಮದ ಕುರಿತ ತಿಳುವಳಿಕೆ

ಶಾಲಾಪೂರ್ವ ಶಿಕ್ಷಣದ ಸಂದರ್ಭದಲ್ಲಿ, ಮಕ್ಕಳ ಶಿಕ್ಷಣದಲ್ಲಿ ಯಾವೆಲ್ಲಾ ಕ್ಷೇತ್ರಗಳ ಸೇರ್ಪಡೆ ಮಾಡಬೇಕು ಎಂಬುದು ಆರಂಭದಿಂದಲೂ ನಮ್ಮ ಮುಂದಿದ್ದ ಸವಾಲಾಗಿತ್ತು. ಇದಕ್ಕಾಗಿ ನಮ್ಮ ಬಳಿ ಯಾವುದೇ ಪೂರ್ವ ನಿರ್ಮಿತ ಪಠ್ಯಕ್ರಮ ಇರಲಿಲ್ಲ. ವಿದ್ಯಾಭವನ ನರ್ಸರಿ ಶಾಲೆಯ ಮಕ್ಕಳೊಂದಿಗೆ ಕೆಲಸ ಮಾಡಿದ ಎರಡರಿಂದ ಮೂರು ವರ್ಷಗಳ ಸೀಮಿತ ಅನುಭವ ಬಿಟ್ಟರೆ ನಮ್ಮ ಬಳಿ ಬೇರೇನೂ ಅನುಭವ ಇರಲಿಲ್ಲ. ಹೀಗಾಗಿ ನಾವು ಬೇರೆ ಬೇರೆ ದೇಶಗಳ ಜನಪ್ರಿಯ ಪಠ್ಯಕ್ರಮಗಳನ್ನು ಅಧ್ಯಯನ ಮಾಡಿದೆವು. ಸಿಂಗಾಪುರದ ಶಾಲೆಗಳು, ಫಿನ್ಲೆಂಡ್ ಮತ್ತು ಇತರೆ ಸ್ಕ್ಯಾಂಡಿನೇವಿಯನ್ ರಾಷ್ಟ್ರಗಳಲ್ಲಿನ ಪಠ್ಯಕ್ರಮದ ಅಧ್ಯಯನವನ್ನುಅದು ಒಳಗೊಂಡಿತ್ತು. ಅಧ್ಯಯನದ ನಂತರ, ನಮ್ಮ ಆರಂಭಿಕ ಪಠ್ಯಕ್ರಮದಲ್ಲಿ ಭಾಷೆಯ ಬೆಳವಣಿಗೆ, ಗಣಿತದ ತಿಳುವಳಿಕೆಯ ಬೆಳವಣಿಗೆ, ಜ್ಞಾನಗ್ರಹಣದ ಬೆಳವಣಿಗೆ, ಸೃಜನಶೀಲತೆಯ ಬೆಳವಣಿಗೆ ಮತ್ತು ಭೌತಿಕ ಬೆಳವಣಿಗೆಗಳಿಗಾಗಿ ಚಟುವಟಿಕೆಗಳ ಸೇರ್ಪಡೆಗಾಗಿ ನಾವು ಕೆಲಸ ಮಾಡಿದೆವು. ಈ ವಿಷಯಗಳಿಂದ ಉಲ್ಲೇಖಿಸಲಾದ ಚಟುವಟಿಕೆಗಳ ಮೇಲೆ ನಾವು ಕೆಲಸ ಮಾಡಿದೆವು ಹಾಗೂ ಅವುಗಳ ಸೈದ್ಧಾಂತಿಕ ಅಂಶಗಳನ್ನು ತರಬೇತಿಯ ಭಾಗವಾಗಿಸಿದೆವು.

ಆಯ್ಕೆ ಮಾಡಿದ ಕ್ಷೇತ್ರಗಳಲ್ಲಿ ಕೆಲಸ ಮಾಡುತ್ತಲೇ ನಾವು ನಮ್ಮ ಅಧ್ಯಯನ ಮತ್ತು ಪ್ರಯೋಗಗಳನ್ನು ಮುಂದುವರಿಸಿದೆವು. ಮರಗಳು, ಸಸ್ಯಗಳು, ಪ್ರಾಣಿಗಳು, ಪಕ್ಷಿಗಳು ಮತ್ತು ಜೀವಿಗಳು ಇತ್ಯಾದಿಗಳನ್ನು ಗುರುತಿಸುವ ರೀತಿಯ ಬೇರೆ ಬೇರೆ ಚಟುವಟಿಕೆಗಳನ್ನು ರೂಪಿಸುವಂತೆ ನಾವು ಸ್ಥಳೀಯ ಪರಿಸರದಿಂದ ವಿಷಯಗಳನ್ನು ಸೇರಿಸಿಕೊಳ್ಳಲು ನಿರ್ಧರಿಸಿದೆವು. ಮೊತ್ತಮೊದಲನೆಯದಾಗಿ ಮಕ್ಕಳಿಗೆ ತಮ್ಮ ಸುತ್ತಮುತ್ತಲಿನ ಪರಿಸರದಲ್ಲಿರುವ ವಸ್ತುಗಳನ್ನು ಪರಿಚಯಿಸಿದರೆ, ಸಹಜವಾಗಿಯೇ ಅವರು ತಮ್ಮ ಪರಿಸರದ ಹೊರಗಿನ ವಸ್ತುಗಳನ್ನು ಗುರುತಿಸಲು ಕೂಡ ತಮ್ಮ ಆಸಕ್ತಿಯನ್ನು ಉಳಿಸಿಕೊಳ್ಳಲು ಸಾಧ್ಯವಾಗುತ್ತದೆ ಎಂದು ನಾವು ಕಂಡುಕೊಂಡೆವು. ಇದರೊಂದಿಗೆ, ಅವರು ತಮ್ಮ ಸುತ್ತಲಿನ ಬೆಳೆಗಳು ಮತ್ತು ಬೆಳೆಗಳೊಂದಿಗೆ ಹವಾಮಾನವನ್ನು ಕೂಡ ಊಹಿಸಲು ಸಮರ್ಥರಾಗುತ್ತಾರೆ ಎಂಬುದನ್ನು ನಾವು ಕಂಡುಕೊಂಡೆವು. ಅಸಲಿಗೆ, ಈ ಸಣ್ಣ ಸಣ್ಣ ಯಶಸ್ಸುಗಳು ನಮ್ಮನ್ನು ಸುತ್ತಮುತ್ತಲಿನ ಪ್ರದೇಶಗಳನ್ನು ಹೆಚ್ಚು ಹೆಚ್ಚಾಗಿ ಅನ್ವೇಷಿಸಲು ಪ್ರೇರೇಪಿಸಿದವು.

ಈ ನಡುವೆ, ಶಾಲಾಪೂರ್ವ ಶಿಕ್ಷಣದ ಕುರಿತು 2018-19 ರ ಎನ್‌ಸಿಇಆರ್‌ಟಿ (NCERT) ಕರಡು ಪಠ್ಯಕ್ರಮವನ್ನು ಬಿಡುಗಡೆ ಮಾಡಲಾಯಿತು. ಅದು ನಮಗೆ ತುಂಬಾ ಸಹಾಯಕವಾಗಿರುವುದು ಸಾಬೀತಾಯಿತು. ಕರಡು ಪಠ್ಯಕ್ರಮದ ಸ್ವರೂಪವು ಹೇಗಿತ್ತೆಂದರೆ, ನಾವು ಅದರಲ್ಲಿ ಆಯ್ಕೆಗಳನ್ನು ಮಾಡಬಹುದಾಗಿತ್ತು. ಆದ್ದರಿಂದ, ತಮ್ಮ ಅನುಭವಗಳನ್ನು

ಸೇರಿಸಿಕೊಂಡು, ತಮ್ಮ ಪಠ್ಯಕ್ರಮದ ಮೂರು ಮೂಲ ಕ್ಷೇತ್ರಗಳನ್ನು ನಿರ್ಧರಿಸಬಹುದಾಗಿತ್ತು ಹಾಗೂ ಅವುಗಳು ಈ ಕೆಳಗಿನಂತಿವೆ-

1 – ಭಾಷೆಯ ಬೆಳವಣಿಗೆ, 2– ಗಣಿತದ ತಿಳುವಳಿಕೆಯ ಬೆಳವಣಿಗೆ ಮತ್ತು, 3 – ಪರಿಸರದ ಅನ್ವೇಷಣೆ.

ಪರಿಸರದ ಅನ್ವೇಷಣೆ ಎಂದರೆ ಪರಿಸರದ ವಿವಿಧ ಬಗೆಯ ಚಟುವಟಿಕೆಗಳನ್ನು ನಡೆಸುವುದು ಎನ್ನುವುದಷ್ಟೇ ನಮ್ಮ ಆಶಯವಲ್ಲ, ಬದಲಿಗೆ ನಾವು ಪರಿಸರದ ಅನ್ವೇಷಣೆಯನ್ನು ವಿಶಾಲ ಮತ್ತು ಆಳವಾದ ದೃಷ್ಟಿಕೋನದ ಹಿನ್ನೆಲೆಯಲ್ಲಿ ತೆಗೆದುಕೊಂಡಿದ್ದೇವೆ. ಅಂದರೆ ಸುತ್ತುಮುತ್ತಲಿನ ಮರ ಗಿಡಗಳು, ಜೀವ ಜಂತುಗಳು, ಪಕ್ಷಿಗಳು ಮತ್ತು ಪ್ರಾಣಿಗಳು ಹಾಗೂ ನೈಸರ್ಗಿಕ ವಾತಾವರಣದ ಹಾಗೂ ಪರಿಸರದ ಬೇರೆ ಬೇರೆ ರೂಪಗಳ ಅವಲೋಕನ, ಅಧ್ಯಯನ ಮತ್ತು ಸಾಮಾಜಿಕ, ಆರ್ಥಿಕ ಮತ್ತು ಸಾಂಸ್ಕೃತಿಕ (ಅದರಲ್ಲಿ ಅವರ ಭಾಷೆ ಮತ್ತು ಸಂಸ್ಕೃತಿಯೂ ಸೇರಿರುತ್ತದೆ) ಪರಿಸರದೊಂದಿಗೆ ತಿಳುವಳಿಕೆ ಮತ್ತು ಪರಸ್ಪರ ಕ್ರಿಯೆಯ ಮೂಲಕ ಕಲಿಕೆ ಮತ್ತು ಬೋಧನೆಯನ್ನು ಕೂಡ ಒಳಗೊಂಡಿರುತ್ತದೆ. ಕೊನೆಗಿದು ಬೇರೆ ಬೇರೆ ವಿಷಯಗಳ ಆಧಾರಸ್ತಂಭವಾಗಿ ರೂಪುಗೊಳ್ಳುತ್ತದೆ.

## ಸ್ಥಳೀಯ ಪಠ್ಯಕ್ರಮದ ಅಭಿವೃದ್ಧಿಪಡಿಸುವಿಕೆ

ಪರಿಸರದೊಂದಿಗೆ ಕೆಲಸ ಮಾಡುತ್ತಲೇ ಭಾರತವು ಬಹುಭಾಷಾ, ಬಹುಸಂಸ್ಕೃತಿಯ ದೇಶವಾಗಿರುವುದರ ಜೊತೆಜೊತೆಗೆ, ಪ್ರಾಕೃತಿಕವಾಗಿಯೂ ಕೂಡ ವೈವಿಧ್ಯತೆಯಿಂದ ಕೂಡಿದ ದೇಶವಾಗಿದೆ ಎಂಬ ಅರಿವಿನ ಬೆಳವಣಿಗೆಯೂ ಆಯಿತು. ಹಿಂದಿಯಲ್ಲಿ ಒಂದು ಗಾದೆ ಮಾತಿದೆ, "ಕೋಸ್ ಕೋಸ್ ಪರ್ ಬದ್ಲೇ ಪಾನೀ, ಆಠ್ ಕೋಸ್ ಪರ್ ಬದಲೇ ಬಾನೀ" ("ಪ್ರತಿ ಕೋಸಿನಲ್ಲೂ ನೀರನ್ನು ಬದಲಿಸಿ, ಎಂಟು ಕೋಸಿಗೆ ಬಾನಿಯನ್ನೇ ಬದಲಿಸಿ!") ಇದು ಅದೇ ವೈವಿಧ್ಯತೆಯನ್ನು ಒತ್ತಿಹೇಳುತ್ತದೆ. ಆದ್ದರಿಂದ ಅದನ್ನು ನಿರಾಕರಿಸುವ ಮೂಲಕ ಯಾವುದೇ ಶಿಕ್ಷಣವನ್ನು ಕಲ್ಪಿಸಿಕೊಳ್ಳಲಾಗದು. ಯೋಜನೆಯ ಅನುಭವಗಳು ಈ ಕಲ್ಪನೆಯನ್ನು ಇನ್ನಷ್ಟು ಬಲಪಡಿಸುತ್ತಿವೆ. ಈ ಯೋಜನೆಯಲ್ಲಿ ಯಾವುದೆಲ್ಲ ಸಕಾರಾತ್ಮಕವಾಗಿದೆಯೋ ಅದರಲ್ಲಿ ಅದರ ಪ್ರಮುಖವಾದ ಪಾತ್ರವಿತ್ತು. ವಿಶೇಷವಾಗಿ ಪ್ರಾಥಮಿಕ ಶಿಕ್ಷಣದಲ್ಲಿ, ಸ್ಥಳೀಯ ಪಠ್ಯಕ್ರಮದ ಅಗತ್ಯ ಏನೆಂಬುದನ್ನು ಈ ಪದ್ಧತಿಯು ಸಾಬೀತುಪಡಿಸಿತ್ತು. ಆದ್ದರಿಂದ ನಾವು ಅದನ್ನು ರಾಷ್ಟ್ರೀಯ ಪಠ್ಯಕ್ರಮದೊಂದಿಗೆ ಪೂರಕವಾಗಿ ಸಂಯೋಜಿಸಿದೆವು.

ರಾಷ್ಟ್ರೀಯ ಕರಡು ಪಠ್ಯಕ್ರಮವು ರಾಷ್ಟ್ರೀಯ ಮಟ್ಟದಲ್ಲಿ ಸಮಗ್ರ ದೃಷ್ಟಿಕೋನ ಮತ್ತು ಅದಕ್ಕನುಗುಣವಾದ ಚಟುವಟಿಕೆಗಳ ಪರಿಹಾರವನ್ನು ಸೂಚಿಸುತ್ತದೆ ಹಾಗೂ ನಮಗೆ ಆಯ್ಕೆಯ ಸ್ವಾತಂತ್ರ್ಯವನ್ನು ಕೂಡ ನೀಡುತ್ತದ. ಆದರೆ ಇದಕ್ಕಾಗಿ ನಾವು ಈ ಸಮಗ್ರ ದೃಷ್ಟಿಕೋನವನ್ನು ನಿರ್ದಿಷ್ಟ ಸಾಂಸ್ಕೃತಿಕ ಮತ್ತು ನೈಸರ್ಗಿಕ ಪರಿಸರದಲ್ಲಿ ಸಾಧಿಸಬೇಕಾಗುತ್ತದೆ. ಆದ್ದರಿಂದ ನಾವು ಈ ಯೋಜನೆಯಲ್ಲಿ ಮಾಡಿದಂತೆ ಸ್ಥಳೀಯ ಅಥವಾ ಒಂದು ಸಾಮಾಜಿಕ-ಸಾಂಸ್ಕೃತಿಕ ಘಟಕವಾಗಿ ದೊಡ್ಡ ಪ್ರಮಾಣದಲ್ಲಿ ಸ್ಥಳೀಯ ಅಂಶಗಳನ್ನು ಸೇರಿಸಬೇಕಾಗುತ್ತದೆ. ಏಕೆಂದರೆ, ಭಾರತದಂತಹ ವಿಶಾಲವಾದ ಮತ್ತು ವೈವಿಧ್ಯಮಯ ದೇಶದಲ್ಲಿ, ಈ ಕೆಲಸವನ್ನು ಯಾವುದೇ ರಾಷ್ಟ್ರೀಯ ಪಠ್ಯಕ್ರಮವು ಏಕಾಂಗಿಯಾಗಿ ಮಾಡಲು ಸಾಧ್ಯವೇ ಇಲ್ಲ.

ಮಗುವಿನ ಮನೆ ಅಥವಾ ಸ್ಥಳೀಯ ಭಾಷೆಯನ್ನು ಅದರ ದಿನನಿತ್ಯದ ಚಟುವಟಿಕೆಗಳಲ್ಲಿ ಸೇರಿಸಲೇಬೇಕಾಗುತ್ತದೆ, ಮಾತ್ರವಲ್ಲದೆ ಸ್ಥಳೀಯ ಭಾಷೆಯಿಂದ ಕಥೆಗಳು/ಹಾಡುಗಳನ್ನು ಸೇರಿಸುವುದು ಮತ್ತು ಸ್ಥಳೀಯವಾದ ಪ್ರಾಕೃತಿಕ ಪರಿಸರ, ಉತ್ಪಾದನೆ ಮತ್ತು ಜೀವನಾಧಾರದ ಚಟುವಟಿಕೆಗಳನ್ನು ಅನ್ವೇಷಿಸುವುದು, ಸ್ಥಳೀಯ ಸಂಸ್ಕೃತಿಗೆ ಸ್ಥಾನ

ನೀಡುವುದು, ಇದೆಲ್ಲವನ್ನೂ ಮಾಡುತ್ತಲೇ ವಿಶಾಲವಾದ ದೃಷ್ಟಿಕೋನವನ್ನು ರೂಪಿಸಬೇಕಾಗುತ್ತದೆ. ಜೊತೆಗೆ ಅದಕ್ಕಾಗಿ ಅವಕಾಶಗಳನ್ನು ಹಾಗೂ ಪೂರಕವಾದ ಪರಿಕರಗಳನ್ನು ಸ್ಥಳೀಯ ಮಟ್ಟದಲ್ಲೇ ರಚಿಸಬೇಕಾಗುತ್ತದೆ. ಈ ಅಂಶಗಳ ಒಟ್ಟು ಮೊತ್ತವನ್ನೇ ನಾವು 'ಸ್ಥಳೀಯ ಪಠ್ಯಕ್ರಮ' ಎಂದು ಕರೆಯುತ್ತೇವೆ. ಈ ಯೋಜನೆಯಲ್ಲಿ ಕೆಲಸ ಮಾಡುವ ಸಂದರ್ಭದಲ್ಲಿ ಈ ಅನುಭವವು ಇನ್ನಷ್ಟು ಆಳವಾಯಿತು. ಮನೆ ಅಥವಾ ಸ್ಥಳೀಯ ಭಾಷೆಯ ಬಳಕೆಯಿಂದ ಪ್ರಾರಂಭವಾದ ಈ ಯಾನವು, ಸ್ಥಳೀಯವಾಗಿ ತಯಾರಿಸಿದ ಪರಿಕರಗಳಿಗೆ ಮತ್ತು ಸ್ಥಳೀಯ ಪರಿಸರದ ವಿವಿಧ ಅಂಶಗಳ ಅನ್ವೇಷಣೆಗೆ ವಿಸ್ತರಿಸಿತು.

ಮಕ್ಕಳು ಸ್ಥಳೀಯ ಸಹಾಯಕ ಪರಿಕರಗಳನ್ನು ತುಂಬಾ ಇಷ್ಟಪಡುತ್ತಿದ್ದರು ಮತ್ತು ಯಾವುದೇ ಹಿಂಜರಿಕೆಯಿಲ್ಲದೆ ಅವುಗಳನ್ನು ಬಳಸುತ್ತಿದ್ದರು. ಇದು ಅವರ ಕಲಿಕೆ ಮತ್ತು ಬೋಧನೆಯಲ್ಲೂ ಪ್ರಮುಖ ಪಾತ್ರ ವಹಿಸುತ್ತಿತ್ತು. ಸ್ಥಳೀಯ ಕಥೆಗಳು/ಹಾಡುಗಳು ಮತ್ತು ಶಿಶು ಗೀತೆಗಳು ಮಕ್ಕಳ ಕಲಿಕೆ ಮತ್ತು ಬೋಧನೆಯಲ್ಲಿ ಆಯಸ್ಕಾಂತದ ರೀತಿಯಲ್ಲಿ ಆಕರ್ಷಣೆ ಮಾಡುತ್ತಲೇ ಪರಿಣಾಮವನ್ನು ಬೀರಿರುವುದನ್ನು ನಮ್ಮ ಈ ಯೋಜನೆಯ ಕೆಲಸದ ಸಮಯದಲ್ಲಿ ನಾವು ಕಂಡುಕೊಂಡೆವು. ಆಗೆಲ್ಲ ಮಕ್ಕಳ ಕಣ್ಣುಗಳು ಕಾಂತಿಯಿಂದ ಮಿಂಚುತ್ತಿದ್ದವು. ಇದೇ ಕಾರಣಕ್ಕಾಗಿ ನಾವು ಅದರ ಮೇಲೆ ಕೆಲಸ ಮಾಡಿದೆವು. ಹಾಗೂ ಕಥೆಗಳು ಮತ್ತು ಹಾಡುಗಳು / ಶಿಶು ಗೀತೆಗಳನ್ನು ಸಂಗ್ರಹಿಸಿ ಅವುಗಳನ್ನು ಕೇಂದ್ರಗಳಲ್ಲಿ ಬಳಸಿದೆವು. ಹಿಂದಿಯಿಂದಲೂ ಸ್ಥಳೀಯ ಪರಿಸರಕ್ಕೆ ಸಂಬಂಧಿಸಿದ ಕಥೆ/ಹಾಡುಗಳನ್ನು ಆರಿಸಿಕೊಂಡೆವು. ಸ್ಥಳೀಯ ಪರಿಸರದ ಪರಿಕರಗಳನ್ನು ಬಳಸಲು ನಾವು ಅಂಗನವಾಡಿ ಕಾರ್ಯಕರ್ತೆಯರಿಗೆ ಪ್ರೋತ್ಸಾಹ ನೀಡಿದೆವು. ಇದರ ಪರಿಣಾಮವಾಗಿ, ಸಣ್ಣ ಮತ್ತು ದೊಡ್ಡ, ಹಗುರ ಮತ್ತು ಭಾರವಾದವುಗಳನ್ನು ಗುರುತಿಸಲು ಸಹಕಾರಿಯಾಗುವಂತೆ ಎಲೆಗಳು ಮತ್ತು ಕಲ್ಲುಗಳ ಬಳಕೆಯನ್ನು ಮಾಡಲು ಯೋಜಿಸಿದೆವು ಹಾಗೂ ಇದನ್ನು ಕಾರ್ಯಕರ್ತೆಯರು ತಾವೇ ಸ್ವಪ್ರೇರಣೆಯಿಂದ ಮುತುವರ್ಜಿ ವಹಿಸಿ ಪೂರ್ಣಗೊಳಿಸಿದರು. ತಮ್ಮದೇ ಹಳ್ಳಿಯ ರೈತರು ತರಕಾರಿಗಳನ್ನು ಹೇಗೆ ಬೆಳೆಯುತ್ತಾರೆ ಮತ್ತು ಅದನ್ನು ಉತ್ಪಾದಿಸುವುದು ಹೇಗೆ ಹಾಗೂ ಮಾರಾಟ ಮಾಡುವುದು ಹೇಗೆ, ಗ್ರಾಮದಲ್ಲಿ ಅಂಗಡಿ ಹೊಂದಿರುವ ಮಹಿಳೆಯರಿಗೆ ಅವು ಎಲ್ಲಿಂದ ಸಿಗುತ್ತದೆ ಎಂಬುದನ್ನು ಅರ್ಥಮಾಡಿಕೊಡಲು ಚಟುವಟಿಕೆಗಳನ್ನು ಆಯೋಜಿಸಲಾಗುತ್ತಿತ್ತು.

## ಉಪಸಂಹಾರ:

ಈ ಮೂರು ವರ್ಷಗಳ ಯೋಜನೆಯ ಯಶಸ್ಸು ಮತ್ತು ವೈಫಲ್ಯಗಳ ನಡುವೆಯೂ, ಕೆಲವು ಪ್ರಮುಖವಾದ ಶಿಕ್ಷಣ ಮತ್ತು ಪಾಠಗಳನ್ನು ಕಲಿಯಲಾಗಿದ್ದು, ಅವು ಈ ಕೆಳಗಿನಂತಿವೆ -

- ಮಗುವಿನ ಮನೆಯ ಭಾಷೆಯನ್ನು ಸಂಪೂರ್ಣವಾಗಿ ಬಳಸಿಕೊಳ್ಳುವ ಮೂಲಕ ಹಿಂದಿ ಮತ್ತು ಇಂಗ್ಲಿಷ್‌ನಂತಹ ಉದ್ದೇಶಿತ ಭಾಷೆಯನ್ನು ಸುಲಭವಾಗಿ ಕಲಿಯಲೂಬಹುದು ಮತ್ತು ಕಲಿಸಲೂಬಹುದು.
- ಮಕ್ಕಳ ಆರಂಭಿಕ ಶಿಕ್ಷಣದಲ್ಲಿ ಶಿಶು ಸಾಹಿತ್ಯದ ಪಾತ್ರ ಮತ್ತು ಸ್ಥಳೀಯ ಸಾಹಿತ್ಯದ ತಿಳುವಳಿಕೆ ಸೃಷ್ಟಿಯಾಯಿತು.
- ಭಾಷಾ ಪ್ರಾವೀಣ್ಯತೆಯು ಮಗುವಿನ ಮುಂದಿನ ಜೀವನ ರೂಪಿಸುವಲ್ಲಿ ಮಹತ್ವಪೂರ್ಣ ಪಾತ್ರವನ್ನು ನಿರ್ವಹಿಸುತ್ತದೆ. ಮಗುವಿನ ಈ ಕೌಶಲ್ಯವು ಇತರೆ ಕೌಶಲ್ಯಗಳನ್ನು ಕಲಿಯಲು ಬಹಳಷ್ಟು ನೆರವಾಗಲಿದೆ.
- ಸಕ್ರಿಯ ಮತ್ತು ಉತ್ತಮವಾದ ಅಂಗನವಾಡಿಗೆ ಇರಬೇಕಾದ ಶೈಕ್ಷಣಿಕ ಕ್ಷೇತ್ರಗಳು ಯಾವುವು ಮತ್ತು ಅದರಲ್ಲಿ ಪರಿಸರದ ಪಾತ್ರ ಏನಿರುತ್ತದೆ ಎಂಬ ತಿಳುವಳಿಕೆ ರೂಪುಗೊಂಡಿತು.

- ಸ್ಥಳೀಯ ಪರಿಸರವು (ಪ್ರಾಕೃತಿಕ, ಸಾಂಸ್ಕೃತಿಕ ಮತ್ತು ಭಾಷಾ) ಬೋಧನೆ-ಕಲಿಕೆಯಲ್ಲಿ ನಿರ್ಣಾಯಕ ಪಾತ್ರವನ್ನು ವಹಿಸುತ್ತದೆ, ಇದರ ಫಲವಾಗಿ, ಒಂದು ಸ್ಥಳೀಯ ಪಠ್ಯಕ್ರಮದ ಪಾತ್ರವು ಸೃಷ್ಟಿಯಾಯಿತು.
- ಸ್ಥಳೀಯ ಪಠ್ಯಕ್ರಮದ ಸವಾಲುಗಳು ಮತ್ತು ದೊಡ್ಡ ಪ್ರಮಾಣದಲ್ಲಿ ಅಂಗನವಾಡಿಗಳಲ್ಲಿ ಕಾರ್ಯ ನಿರ್ವಹಿಸಲು ಹಾಗೂ ಅವರನ್ನು ಸಕ್ರಿಯರಾಗಿಸಲು ಅದರಲ್ಲಿ ಕೆಲಸ ಮಾಡುವ ಜನರಿಗೆ ಅವಶ್ಯಕವಾದ ಶೈಕ್ಷಣಿಕ ಸಿದ್ಧತೆಯು ಹೇಗಿರಬೇಕೆಂಬ ತಿಳುವಳಿಕೆ ರೂಪುಕೊಂಡಿತು.